ಸಂಪುಟ ೧೬ ಸಂಚಿಕೆ ೧ ಮಾರ್ಚ್ ೧೯೯೬

# ಬ್ಯಾಂಕಿಂಗ್ ಪ್ರಪಂಚ



ವಾರ್ಷಿಕ ಚಂದಾ : ರೂ. 20
ಆಜೀವ ಚಂದಾ : ರೂ. 200

## ಈ ಸಂಚಿಕೆಯಲ್ಲಿ



ಸಮನ್ವಯ ಸಮಿತಿ (ಭಾರತೀಯ ಸ್ಟೇಟ್ ಬ್ಯಾಂಕ್ ಕನ್ನಡ ಸಂಘಗಳು)
ಭಾರತೀಯ ಸ್ಟೇಟ್ ಬ್ಯಾಂಕ್, ನಂ. ೨೨ ಜಯಚಾಮರಾಜೇಂದ್ರ ರಸ್ತೆ, ಬೆಂಗಳೂರು ೫೬೦೦೦೨

ಹಣ ಬ್ಯಾಂಕಿಂಗ್ ವಿಚಾರಗಳಿಗೆ ಮೀಸಲಾದ ತ್ರೈಮಾಸಿಕ

# ಭಾರತ ಮತ್ತು ಯೂರೊ ಹಣ

ಪ್ರೊ. ಸಿ. ಗೋವಿಂದಾಚಾರ್

**ದೇಶೀಯ ಉದ್ಯಮಗಳು ಹೆಚ್ಚು ಸ್ಪರ್ಧಾತ್ಮಕವಾಗಲಿ ಹಾಗೂ ಒಳ್ಳೆಯ ಉತ್ಪಾದನ ಸಾಧನ ಗಳನ್ನೊಳಗೊಂಡ ಉನ್ನತ ತಾಂತ್ರಿಕಜ್ಞಾನ ಪ್ರಾಪ್ತವಾಗಲಿ ಎಂಬ ಘನ ಉದ್ದೇಶದಿಂದ ಸರ್ಕಾರ ವಿದೇಶಿ ಹೂಡಿಕೆಗೆ ಆದ್ಯತೆ ನೀಡಿದ್ದರ ಪರಿಣಾಮವಾಗಿ ಐರೋಪ್ಯ ಪೇಟೆಯಲ್ಲಿ ಸುಲಭ ದರಗಳಲ್ಲಿ ಬಂಡವಾಳ ಸಂಗ್ರಹಿಸಿ ಸ್ವದೇಶದಲ್ಲಿ ಪ್ರವಿಸ್ತರಣೆ ಮಾಡುವ ವಿಧಾನ ಜಾರಿಗೆ ಬಂತು. ಆದರೆ ಇದರ ಫಲಗಳೇನೂ ಹೇಳಿಕೊಳ್ಳುವಂಥವಲ್ಲ.**

ಭಾರತ ಉದಾರೀಕರಣದಿಂದ ಆರ್ಥಿಕ ಸುಧಾರಣೆಯತ್ತ ಸಾಗಿರು ವುದು 90ರ ದಶಕದ ವೈಶಿಷ್ಟ್ಯವಾಗಿದೆ. ಚೀನಾ ದೇಶ ಇನ್ನೊಂದು ಉದಾಹರಣೆ ಆಗಿದೆ. ಖಾಸಗೀಕರಣಕ್ಕೆ ಮುಂಚೆ ಚೀನಾದ ವಿದೇಶಿ ಹೂಡಿಕೆ ಶೂನ್ಯವಾಗಿದ್ದು, 1978–90ರ ಅವಧಿಯಲ್ಲಿ 1 ಬಿಲಿಯನ್ ಡಾಲರ್‌ಗಳಾಗಿ, 90–94ರ ಅವಧಿಯಲ್ಲಿ ಅದು 12 ಬಿಲಿಯನ್ ಡಾಲರ್‌ಗಳ ಗಡಿ ದಾಟಿತು. ಹೀಗೆಯೆ ಟೈವಾನ್ ಕೊರಿಯ ಹಾಂಕಾಂಗ್ ದೇಶಗಳು ಸುಧಾರಣೆಯ ಭರದಲ್ಲಿವೆ. 1991ರ ಸುಮಾರಿಗೆ ಭಾರತದ ವಿದೇಶಿ ವಿನಿಮಯದ ಪರಿಸ್ಥಿತಿ ಶೋಚನೀಯವಾಗಿತ್ತು. ಇದನ್ನೇ ಗಮನದಲ್ಲಿಟ್ಟ ಸರ್ಕಾರ ದೇಶೀಯ ಉದ್ಯಮಗಳು ಹೆಚ್ಚು ಸ್ಪರ್ಧಾತ್ಮಕವಾಗಲಿ ಹಾಗೂ ಒಳ್ಳೆಯ ತಯಾರಿಕೆ ಸಾಧನಗಳನ್ನೊಳಗೊಂಡ ಉನ್ನತ ತಾಂತ್ರಿಕ ಜ್ಞಾನ ಪ್ರಾಪ್ತವಾಗಲಿ ಎಂಬ ಘನ ಉದ್ದೇಶದಿಂದ ವಿದೇಶಿ ಹೂಡಿಕೆಗೆ ಆದ್ಯತೆ ನೀಡಿತು. ಹಿಂದಿನಿಂದಲೂ ಬಂದಿರುವ ನೇರ ಹೂಡಿಕೆ (ಸಾಂಪ್ರದಾಯಿಕವಾದ ಆರ್‌ಬಿಐ ಹಾಗೂ ಭಾರತೀಯ ಅನಿವಾಸಿ ಮಾರ್ಗಗಳು) ಮತ್ತು ಆಧಿಪತ್ಯ ಹೂಡಿಕೆ (ವಿದೇಶಿ ಸಾಂಸ್ಥಿಕ ಹೂಡಿಕೆ ಹಾಗೂ ಸಾಗರೋತ್ತರ ನಿಧಿಗಳು) ವಿದೇಶಿ ಹೂಡಿಕೆಯ ಎರಡು ಪ್ರಮುಖ ಸಾಧನಮೂಲಗಳಾಗಿವೆ. ಭಾರತೀಯ ಸಂಸ್ಥೆಗಳು ಐರೋಪ್ಯ ಪೇಟೆಯಲ್ಲಿ ಸುಲಭ ದರಗಳಲ್ಲಿ ಬಂಡವಾಳ ಸಂಗ್ರಹಿಸಿ ಸ್ವದೇಶದಲ್ಲಿ ಪ್ರವಿಸ್ತರಣೆಮಾಡಲು ಸರ್ಕಾರ ಉದ್ದೇಶಿಸಿತು. ಇದಕ್ಕೆ ಐರೋಪ್ಯ ನೀಡಿಕೆ (ಯೂರೊ ಇಸ್ಯು) ಎಂದು ಹೆಸರು. ಅಲ್ಲಿಯ ಪೇಟೆಗಳಲ್ಲಿ ಭಾರತೀಯ ಸಂಸ್ಥೆಗಳು ತಂತಮ್ಮ ಷೇರುಗಳನ್ನು ಪಟ್ಟೀಕರಿಸಿ ವ್ಯಾಪಾರ ಮಾಡುವುದೇ ಇದರರ್ಥ. ಇದರಿಂದ ಬಂದ ಹಣವೇ ಯೂರೊ ಹಣ. ಇದ ರಿಂದಾಗಿ ಜಿಡಿಆರ್ ಹಾಗೂ ಪರಿವರ್ತನೀಯ ಬಾಂಡುಗಳು ಎಂಬ ಎರಡು ಸಂಲೇಖಗಳ—ಮಾಧ್ಯಮಗಳ—ಮಾರ್ಗಗಳ—ಉದಯ ವಾಯಿತು.

ಜಿಡಿಆರ್ ಎಂಬುದು ವಿಶ್ವಡಿಪಾಸಿಟರಿ ರಸೀತಿಯ ಸಂಕ್ಷಿಪ್ತಪದ. ಖಾಸಗೀಕರಣದ ಕೂಸಾದ ಇದನ್ನು 'ಭಾರತದ ಕಾಗದ' ಎಂದು ಕರೆಯುವರು. ಇಲ್ಲಿ 'ಡಿಪಾಸಿಟರಿ' ಎಂಬ ಪದಕ್ಕೆ 'ನ್ಯಾಸಧಾರಿ' ಎಂಬ ಸೂಕ್ಷ್ಮವಾದ ಅರ್ಥವಿದೆ. ಇದು ವೃತ್ತಿಪರವ್ಯಕ್ತಿ ಆಗಿರ ಬಹುದು ಅಥವಾ ವಿನಿಯೋಜನ ಸಂಸ್ಥೆ ಆಗಿರಬಹುದು. ಹೂಡು ಪವನಿಗೆ ಡಿಪಾಸಿಟರಿಯಿಂದ ಒಂದು ರಸೀತಿ(ನಮ್ಮಲ್ಲಿಯ 'ಸ್ಕ್ರಿಪ್' ನಂತೆ) ಕೊಡಲಾಗುವುದು. ಈ ಎರಡೂ ಪಕ್ಷಗಳ ನಡುವೆ (ಅ) ವಿಶ್ವಸಮನ್ವಯ ಅಧಿಕಾರಿ, (ಆ) ಅಗ್ರನಿಧಿನಿರ್ವಾಹಕ ಹಾಗೂ (ಇ) ಡಿಪಾಸಿಟರಿ ನೇಮಿಸಿರುವ ಅಭಿರಕ್ಷ ಮಧ್ಯವರ್ತಿ ಗಳಾಗಿ ಕೆಲಸ ಮಾಡುತ್ತಾರೆ. ಸಂಸ್ಥೆಗಳು ತಮ್ಮ ಸ್ವಂತ ವ್ಯವಸ್ಥೆ ಯನ್ನು ಮಾಡಿಕೊಳ್ಳಬಹುದು. ಆದ್ದರಿಂದ ಯೂರೊ ಕಲಾಪ ಒಂದು ಸಾಂಸ್ಥಿಕ ವ್ಯವಸ್ಥೆ ಆಗಿರುತ್ತೆ. ಇದರಲ್ಲಿ ಮಾರ್ಗನ್ ಸ್ಟೇನ್ಲಿ, ರಾಬರ್ಟ್ ಫ್ಲೆಮಿಂಗ್, ಮೆರಿಲ್ ಲಿಂಚ್, ಬೇರಿಂಗ್ ಸೆಕ್ಯುರಿಟೀಸ್ ಮುಂತಾದ ವೃತ್ತಿಪರ ಸಂಸ್ಥೆಗಳು, ಇನ್ನೂ ಅನೇಕ ಹಣ ವಿನಿ ಯೋಜನ ಬ್ಯಾಂಕುಗಳು, ವಣಿಕ ಬ್ಯಾಂಕುಗಳು ಅಭಿಕರಣ ಸಂಸ್ಥೆ ಗಳಾಗಿವೆ. ಜಿಡಿಆರ್ ಕಲಾಪದಲ್ಲಿ ಎಲ್ಲ ರೀತಿಯ ಆಡಳಿತ ನಿರ್ವಹಣೆ ಯನ್ನು ಡಿಪಾಸಿಟರಿ ಮಾಡುವನು. ಇವನೇ ಲಾಭಾಂಶವನ್ನು ಹಂಚುವನು, ಬಾಂಡ್‌ದಾರರಿಗೆ ಬಡ್ಡಿ ಪಾವತಿ ಮಾಡುವನು ಹಾಗೂ ತನ್ನ ದಳ್ಳಾಳಿ ಕಮಿಶನ್ ಸೇವಾಶುಲ್ಕಗಳನ್ನು ಗಿಟ್ಟಿಸಿ ಕೊಳ್ಳುವನು.

### ಜಿಡಿಆರ್ ಲಕ್ಷಣಗಳು

1 ಯೂರೊ ಪರಿವರ್ತನೀಯ : ಪ್ರತಿ ಜಿಡಿಆರ್, ಮಾರುವ ಸಂಸ್ಥೆಯ ಸಾಧಾರಣ ಶೇರುಗಳನ್ನು ಪ್ರತಿನಿಧಿಸುತ್ತದೆ. ಜಿಡಿಆರ್ ಶೇರನ್ನು ಸಾಧಾರಣ ಶೇರುಗಳಿಗೆ ಪರಿವರ್ತಿಸಿ ದೇಶೀಯ ಪೇಟೆ ಗಳಲ್ಲಿ ಪಟ್ಟೀಕರಣ ಮಾಡಿ ಮಾರಲಾಗುವುದು. ನಂತರವೇ ಅದಕ್ಕೆ ಮತ ಚಲಾವಣೆ ಹಕ್ಕು ಪ್ರಾಪ್ತವಾಗುವುದು. ಈ ಶೇರು ಗಳನ್ನು ಜಿಡಿಆರ್‌ಗೆ ಪುನಃ ಪರಿವರ್ತಿಸುವಂತಿಲ್ಲ. ರೂಪಾಯಿ ಪೂರ್ಣ ಪರಿವರ್ತನೆ ಆದಮೇಲೆ ದ್ವಿಮಾರ್ಗ ವ್ಯವಹಾರ ಸಾಧ್ಯ. ಅಲ್ಲಿಯವರೆಗೆ ಲಾಭಾಂಶ ವಿತರಣೆ ರೂಪಾಯಿ ಯಲ್ಲಿ ಮಾತ್ರ. ಡಿಪಾಸಿಟರಿಯಾಗಲಿ ಇದರಲ್ಲಿ ತೊಡಗಿರುವ ಅಭಿಕರಣ ಸಂಸ್ಥೆಗಳಾಗಲಿ ದೇಶೀಯ ಪೇಟೆಯ ನೇರ ಸಂಬಂಧ

ವಿಲ್ಲದೆ ಯೂರೊ ಹಣ ಎತ್ತಬಹುದು. ಆದರೆ ವಿದೇಶಿ ಸಾಂಸ್ಥಿಕ ಹೂಡಿಕೆದಾರರಿಗೆ ಈ ಅವಕಾಶವಿಲ್ಲ. ಇವರು ದೇಶೀಯ ಪೇಟೆಯಲ್ಲಿ ನೊಂದಾವಣೆ, ವರ್ಗಾವಣೆ, ಸ್ಟ್ಯಾಂಪ್ ಶುಲ್ಕ ಮುಂತಾದ ಕಟ್ಟುಪಾಡುಗಳನ್ನು ಎದುರಿಸಬೇಕು. ಜಿಡಿಆರ್ ವ್ಯವಹಾರದಲ್ಲಿ ಬಂಡವಾಳ ಗಳಿಕೆ ತೆರಿಗೆ ಇಲ್ಲ.

2 **ವೆಚ್ಚ :** ಪ್ರತಿ ಜಿಡಿಆರ್ ಕಲಾಪದ ವೆಚ್ಚ ಶೇ. 5ರಿಂದ 7ರಷ್ಟಾಗಬಹುದು. ದೇಶೀಯ ಪೇಟೆಯಲ್ಲಿ ಶೇ. 9ರಂತೆ ಬಂಡವಾಳ ಕೂಡಿದರೆ, ಐರೋಪ್ಯ ಪೇಟೆಯಲ್ಲಿ ಈ ದರ ಕೇವಲ ಶೇ. 4. ಇದೇ ಯೂರೊ ಹಣದ ಪ್ರಮುಖ ಲಕ್ಷಣ.

3 **ನಮ್ಯತೆ:** ಎಲ್ಲಾ ಸಾಮಾನ್ಯ ಶೇರುಗಳಂತೆ ಜಿಡಿಆರ್ ಶೇರುಗಳು ಅಧಿಮೌಲ್ಯ ಸೋಡಿ ಮೂಲಕ ಮಾರಾಟವಾಗುವುದು. ಇದು ಸಂಸ್ಥೆಗಳ ಸ್ಥಾನಮಾನ ಸ್ಥಿತಿಗತಿಗಳನ್ನು ಅವಲಂಬಿಸಿದೆ. ಐಟಿಸಿ ಗ್ರಾಸಿಮ್, ರಿಲೈಯನ್ಸ್, ಅರವಿಂದ್ ಮಿಲ್ಸ್, ಬಜಾಜ್ ಆಟೋ, ವಿಡಿಯೊಕಾನ್ ಇಂಟರ್‌ನ್ಯಾಷನಲ್, ಇಂಡೋಗಲ್ಫ್ ಮುಂತಾದ 'ಬ್ಲೂಚಿಪ್' ಸಂಸ್ಥೆಗಳು ವಿವಿಧ ದೇಶಗಳಲ್ಲಿ ರಸ್ತೆ ಪ್ರಚಾರದ ಮೂಲಕ ಬಿರುಸಿನ ವ್ಯಾಪಾರ ಮಾಡಿ ಅಧಿಮೌಲ್ಯದ ಸಿಹಿಯನ್ನುಂಡಿವೆ. ದೇಶೀಯ ಪೇಟೆಗಳು ವಿಶ್ವಪೇಟೆಯನ್ನೇ ಅನುಸರಿಸುವುವು. ಬೇಡಿಕೆ-ಪೂರೈಕೆಗಳ ಮೇಲೆ ಬೆಲೆ ನಿರ್ಣಯ ಅವಲಂಬಿಸುವುದು. ಜಿಡಿಆರ್ ಕಲಾಪಗಳನ್ನು ಪೂರೈಸಲು 15ರಿಂದ 30 ದಿನಗಳು ಬೇಕಾಗುವುದು. ಬೆಲೆ ನಿರ್ಣಯದಲ್ಲಿ ನಮ್ಯತೆ ಇರುವುದು ಉಭಯ ಪಕ್ಷಗಳಿಗೆ ಅನುಕೂಲವಾಗಿದೆ. ಆರಂಭದಲ್ಲಿ (1992) ಹಿಂದಿನ ದಿನದ ಬೆಲೆಯನ್ನು, ನಂತರ ಎರಡು ದಿನಗಳ ಹಿಂದೆ ಇದ್ದ ಬೆಲೆಯನ್ನು, ಕ್ರಮೇಣ ಹಿಂದಿನ 5 ದಿನಗಳ ಸರಾಸರಿ ಬೆಲೆಯನ್ನು, ಶೇರು ದಳ್ಳಾಳಿಗಳ ಮಾಹಿತಿ-ವರದಿ ಮೇರೆಗೆ ವಾಸ್ತವ ಬೆಲೆಯನ್ನು ಮಾರಾಟ ನಿರ್ವಾಹಕನಿಂದ ಬರುವ ಸೂಚಿತ ಬೆಲೆಗಳನ್ನು ಆಧಾರವಾಗಿಟ್ಟುಕೊಂಡು ಜಿಡಿಆರ್ ಬೆಲೆಗಳನ್ನು ನಿರ್ಧರಿಸಲಾಗುತ್ತಿತ್ತು. ಸ್ಥಳೀಯ ಬೆಲೆಗಿಂತ ಶೇ. 8–10ರಷ್ಟು ಸೋಡಿ ಬಿಟ್ಟು ಬೆಲೆ ಕಟ್ಟುವರು. ಉದಾ: 10 ಡಾಲರ್‌ನ ಒಂದು ಜಿಡಿಆರ್ ಶೇರನ್ನು ಶೇ. 8ರಷ್ಟು ಸೋಡಿ ಬಿಟ್ಟರೆ ಮುಂಬಯಿಯಲ್ಲಿ ಅದರ ಅಂತಿಮ ಬೆಲೆ ಸುಮಾರು 375ರೂಗಳಾಗಿ ಮಾರಲಾಗುವುದು. (ಕೋಷ್ಟಕ ನೋಡಿ)

| ಸಂಸ್ಥೆ ಹೆಸರು | ಜಿ.ಡಿ.ಆರ್ ಮೊತ್ತ (ಮಿಲಿಯನ್ ಡಾಲರುಗಳಲ್ಲಿ) | ಅಲ್ಲಿಯ ಬೆಲೆ (ಡಾಲರಿನಲ್ಲಿ) | ಸ್ಥಳೀಯ ಬೆಲೆ (ರೂಪಾಯಿಯಲ್ಲಿ) | ಜಿಡಿಆರ್ ಸ್ಥಳೀಯ ಶೇರು ಅನುಪಾತ |
|---|---|---|---|---|
| 1 ಐಟಿಸಿ | 4.5 | 16 | 510 | 1=1+1 ಪುಕ್ಕಟೆ ವಾರಂಟ್ |
| 2 ಹಿಂಡಾಲ್ಕೊ | 4.4 | 16.10 | 565 | 2=1+1 ಪರಿವರ್ತನೀಯ ವಾರಂಟ್ |
| 3 ಗ್ರಾಸಿಮ್ | 6.9 | 12 98 | 472.50 | 1=1 |
| 4 ರಿಲೈಯನ್ಸ್ | 9.2 | 16.35 | 300 | 1=2 |
| 5 ಭಾರತ್‌ಪೆಟ್ರೊ | 8.5 | ಶೇ 13 ಸೋಡಿ | | 1=3 |

(ಅಂಕಿ ಅಂಶಗಳು : 'ಬಿಸನೆಸ್ ಇಂಡಿಯಾ'ದಿಂದ)

4 **ವಾರಂಟ್ ಆಕರ್ಷಣೆ:** ಭಾರತೀಯ ಸಂಸ್ಥೆಗಳು ಜಿಡಿಆರ್ ಪರವಾದರೆ, ವಿದೇಶಿ ಹೂಡಿಕೆದಾರರು ಪರಿವರ್ತನೀಯ ಬಾಂಡ್‌ಗಳ ಪರ. ಬಾಂಡ್‌ನಲ್ಲಿ 'ಕೂಪನ್ ರೇಟ್' ಎಂದು ನಿರ್ದಿಷ್ಟವಾದ ಬಡ್ಡಿದರವನ್ನು ನಿಗದಿಪಡಿಸಿರುತ್ತೆ. ಇದನ್ನು ಶೇರಿಗೆ ಪರಿವರ್ತಿಸುವವರೆಗೂ ಹೂಡಿರುವವನಿಗೆ ಡಾಲರಿನಲ್ಲಿ ಬಡ್ಡಿ ಸಲ್ಲುವುದು. ಬಾಂಡ್ ಬೇಡವೆಂದಾಗ ಡಾಲರಿನಲ್ಲೇ ಹಣ ವಾಪಸಾಗುವುದು. ಯೂರೊ ಹಣದ ಒಟ್ಟು ಮೊತ್ತದಲ್ಲಿ ಜಿಡಿಆರ್‌ನ ಪಾಲು ಶೇ. 52. ಬಾಂಡ್‌ಗಳು 40% ಹಾಗೂ ವಾರಂಟ್ ಸಹಿತವಾದ ಜಿಡಿಆರ್ 08%.ಮೊದಮೊದಲು 18ರಿಂದ 24 ತಿಂಗಳ ಅವಧಿಯ ವಾರಂಟ್‌ಗಳಿಗೆ ಅಧಿಕ ಬೇಡಿಕೆ ಇತ್ತು. ಸರ್ಕಾರ ಪರಿವರ್ತನೀಯ ಅವಧಿಯನ್ನು ಎರಡು ವರ್ಷಗಳಿಗೆ ನಿಗದಿಪಡಿಸಿತು. ಇದಕ್ಕೆ 'ಲಾಕ್ ಇನ್' ಅವಧಿ ಎಂದು ಹೆಸರು. ಕ್ರಮೇಣ ಈ ನಿಬಂಧನೆಯನ್ನು ಸರ್ಕಾರ ತೆಗೆದುಹಾಕಿತು. ಯಾವಾಗ ಬೇಕಾದರೂ ಜಿಡಿಆರ್‌ಗೆ ಹಾಗೂ ಜಿಡಿಆರ್‌ನ್ನು ಸ್ಥಳೀಯ ಸಾಮ್ಯ ಅಥವಾ ಬೋನಸ್ ಶೇರುಗಳಿಗೆ ಪರಿವರ್ತಿಸುವ ಹಕ್ಕು ವಾರಂಟ್‌ದಾರರಿಗೆ ಪ್ರಾಪ್ತವಾಯಿತು. ಪ್ರತಿ ಜಿಡಿಆರ್‌ಗೆ ವಾರಂಟನ್ನು ಲಗತ್ತಿಸುವುದು ಉತ್ತೇಜನಕಾರಿ ಆಯಿತು. ನಿಗಮ ವಲಯದಲ್ಲಿ ಇದನ್ನು 'ಸ್ವೀಟ್ನರ್ಸ್' ಎಂದು ಕರೆಯುವರು. ಇದರ ವಾಹಕ ಲಕ್ಷಣದಿಂದ ನಷ್ಟ ಸಂಭಾವ್ಯತೆಯನ್ನು ಹಾಗೂ ಇದರಲ್ಲಿಸಟ್ಟಾ ವ್ಯಾಪಾರವನ್ನು ತೊಡೆದುಹಾಕಲು ಸರ್ಕಾರ ವಾರಂಟ್ ಸಹಿತವಾದ ಜಿಡಿಆರ್ ಮಾರಾಟವನ್ನು ನಿಷೇಧಿಸಿತು. ಅಲ್ಲಿಯವರೆಗೆ 8 ಸಂಸ್ಥೆಗಳು ಈ ವ್ಯವಹಾರದಲ್ಲಿ ತೊಡಗಿದ್ದುವು. ಇವುಗಳ ಪೈಕಿ 3 ಸಂಸ್ಥೆಗಳು ನೀಡಿರುವ ವಾರಂಟ್‌ಗಳು ಡಿಸೆಂಬರ್ 95ಕ್ಕೆ ಮುಕ್ತ ಆಗುವುದು. ಎರಡೂ ಕಡೆಗಳ ಬೆಲೆಗಳ ಅಂತರದಿಂದ ಲಾಭ ಗಳಿಸುವ ವ್ಯಾಪಾರ ಬಿರುಸಾಗಿಯೇ ಸಾಗಿತ್ತು. ಅಂತರಪಣನವಾಗ (ಆರ್‌ಬಿಟ್ರೇಜ್) ಬೇಕಾದರೆ 5–6 ವಾರಗಳು ಬೇಕಾಗಬಹುದು.

## ಪ್ರಗತಿ ಎಷ್ಟು?

ಶೇರು ಪೇಟೆ ಹಗರಣದಿಂದ ಪೇಟೆ ವ್ಯವಹಾರಗಳು ಸ್ಥಗಿತಗೊಂಡು ಅವ್ಯವಸ್ಥೆ ಉಂಟಾಗಿ ಎಲ್ಲರ ಗಮನ ಯೂರೊ ಹಣದತ್ತ ಸರಿಯಿತು. ಸುಲಭ ದರದಲ್ಲಿ ಬಂಡವಾಳ ಎತ್ತುವ ಆಸೆಯಿಂದ ಭಾರತೀಯ ಸಂಸ್ಥೆಗಳು ಐರೋಪ್ಯ ಪೇಟೆಗೆ ಧಾವಿಸಲು ಅಣಿ ಮಾಡಿಕೊಂಡವು. 1992ರಲ್ಲಿ ಸರ್ಕಾರ ಅನುಮತಿಸಿತು. ಮೇ 1992ರಲ್ಲಿ ರಿಲೈಯನ್ಸ್ ಸಂಸ್ಥೆಯಿಂದ ಪ್ರಥಮ ಜಿಡಿಆರ್ ಹೊರಬಂತು. ಜೂನ್‌ನಿಂದ ಡಿಸೆಂಬರ್‌ವರೆಗೆ ಎಂಟು ಕಲಾಪಗಳಲ್ಲಿ ಐಟಿಸಿ, ಗ್ರಾಸಿಮ್, ಹಿಂಡಾಲ್ಕೊ ಮುಂತಾದ ಪ್ರಮುಖ ಸಂಸ್ಥೆಗಳು ಸುಮಾರು ಒಂದು ವರ್ಷ ಅಧಿಮೌಲ್ಯದ ಸಿಹಿಯನ್ನನುಭವಿಸಿದ್ದಲ್ಲದೆ ಅಧಿಕ ಚಂದಾ ಅನುಕೂಲವನ್ನು ಪಡೆದವು. ಇದರಲ್ಲಿ ಸ್ವಲ್ಪ ಭಾಗವನ್ನು ಸಂಸ್ಥೆ ಇಟ್ಟುಕೊಳ್ಳಲು ಸರ್ಕಾರ ಅನುಮತಿಸಿತು. 'ಈ ಸೌಲಭ್ಯವನ್ನು ಗ್ರೀನ್ ಷೂ ಆಪ್ಶನ್' ಎಂದು ಕರೆಯುವರು. ಐರೋಪ್ಯ ಪೇಟೆಗೆ ಭಾರತೀಯ ಸಂಸ್ಥೆಗಳ ನೂಕುನುಗ್ಗಲು ಶುರುವಾಗಿ ಒತ್ತಡ ಹೆಚ್ಚಾಯಿತು. ಇದರಿಂದ ಸರ್ಕಾರಕ್ಕೆ ನಿಯಂತ್ರಣ ಅನಿವಾರ್ಯವಾಗಿ 1993ರಲ್ಲಿ ಜಿಡಿಆರ್ ನಿಯಮಾವಳಿಯನ್ನು ಕಾಯ್ದೆ ರೂಪದಲ್ಲಿ ಹೊರಡಿಸಿತು. ಯೂರೊ ಹಣದ ಧ್ಯೇಯೋದ್ದೇಶಗಳಿಂದ ಸಂಸ್ಥೆಗಳಿಗಿರಬೇಕಾದ ಅರ್ಹತೆಗಳವರೆಗೆ ಈ ಕಾಯ್ದೆಯಲ್ಲಿ ಕಟ್ಟುಪಾಡುಗಳನ್ನು ವಿಧಿಸಲಾಗಿದೆ.

1 **ಧ್ಯೇಯ :** ಬಂಡವಾಳ ಸರಕುಗಳನ್ನು, ದೇಶೀಯ ಸರಕುಗಳನ್ನು ಕೊಳ್ಳುವುದು, ಆಯಾತಗಳಿಗೆ ಹಣ ಒದಗಣೆ, ಸ್ಥಾವರ ಉಪಕರಣಗಳ ಕೊಳ್ಳುವಿಕೆ ದೇಶದ ಪರಿಯೋಜನೆಗಳಿಗೆ ಹಣ ಒದಗಿಸುವುದು.

2 ಯೂರೊ ಹಣದ ಮೊತ್ತ, ರಚನೆ, ಕರಾರು, ಅಧಿಕೃತ ವ್ಯವಸ್ಥೆಯೋ ಅಥವ ಸ್ವಂತ ವ್ಯವಸ್ಥೆಯೋ—ಲಿಖಿತರೂಪದಲ್ಲಿರಬೇಕು.

3 ಸಂಸ್ಥೆಯ ಮೂರು ವರ್ಷಗಳ ಹಿಂದಿನ ಉತ್ತಮ ಪರಿಸ್ಥಿತಿಯನ್ನು ಕುರಿತ ಪರಿಚಯ ಪ್ರತಿಕೆಯೊಂದನ್ನು ಹೊರಡಿಸಿ ಲಂಡನ್ನಿನಲ್ಲಿರುವ ತಜ್ಞ ತಂಡಕ್ಕೆ ಇದರ ಪ್ರತಿಯೊಂದನ್ನು ಕೊಟ್ಟು ಆ ತಂಡ ನೀಡುವ ಸಂದರ್ಶನಾವಕಾಶವನ್ನು ಎದುರು ನೋಡುತ್ತಿರಬೇಕು.

4 ನಿಗಮಹಂತದಲ್ಲಿ (i) ನಿರ್ದೇಶಕ ಮಂಡಲಿಯಿಂದ (ii) ಸರ್ವಸದಸ್ಯರ ಸಭೆಯಲ್ಲಿ ಹಾಗೂ (iii) ಕಂಪೆನಿ ರಿಜಿಸ್ಟ್ರಾರ್‌ನಿಂದ ಒಪ್ಪಿಗೆ ಪಡೆದಿರಬೇಕು.

5 ಸರ್ಕಾರದ ಹಂತದಲ್ಲಿ ವಿತ್ತಮಂತ್ರಾಲಯ ಮಂತ್ರಿ ಸಚಿವ ಮಂಡಲಿಯ ಆರ್ಥವ್ಯವಹಾರ ಸಮಿತಿಯಿಂದ ಒಪ್ಪಿಗೆ ಪಡೆದಿರಬೇಕು.

6 ಜಿಡಿಆರ್ ವ್ಯವಹಾರದಲ್ಲಿ ವಿದೇಶಿ ಚಲಾರ್ಥವಾಗಲಿ ವಿದೇಶಿ ವಿನಿಮಯದ ಪಾತ್ರವಾಗಲಿ ಇದ್ದಲ್ಲಿ ಭಾರತೀಯ ರಿಜರ್ವ್ ಬ್ಯಾಂಕ್‌ನ ಪೂರ್ವಾನುಮತಿ ಪಡೆದಿರಬೇಕು.

7 ಲಂಡನಿನಲ್ಲಿ ಅಥವ ಬೇರೆ ಯಾವ ಐರೋಪ್ಯ ಪೇಟೆಯಲ್ಲಿ ಪಟ್ಟೀಕರಣಮಾಡಬಹುದು.

8 ಎರಡು ಜಿಡಿಆರ್ ಕಲಾಪಗಳ ಮಧ್ಯೆ ಒಂದು ವರ್ಷ ಅಂತರವಿರಬೇಕು.

9 ವಿತ್ತ ಮಂತ್ರಾಲಯದಿಂದ 'ಅಸ್ತು' ಬಂದ ಮೇಲೆ ಜಿಡಿಆರ್ ಕಲಾಪಗಳನ್ನು ಮೂರುತಿಂಗಳೊಳಗಾಗಿ ಪೂರ್ಣಗೊಳಿಸಬೇಕು. ಹಾಗಾಗದಿದ್ದಲ್ಲಿ ಕ್ಯೂನಲ್ಲಿರುವ ಮುಂದಿನ ಸಂಸ್ಥೆಗೆ ಅವಕಾಶವಾಗುವುದು.

10 ನೇರವಾದ ಅಂತರಪಣನ ನಿಷಿದ್ಧ.

91ರಿಂದ 95ರ ಜನವರಿ ವರೆಗೆ ಒಟ್ಟು 2,837 ವಿದೇಶಿ ಹೂಡಿಕೆಯ ಪ್ರಸ್ತಾವನೆಗಳನ್ನು ಸರ್ಕಾರ ಒಪ್ಪಿದೆ. ಇದರಲ್ಲಿ ತೊಡಗಿರುವ ಹಣ (5,230 ಕೋಟಿ ಜಿಡಿಆರ್ ಸೇರಿ) 28,000 ಕೋಟಿ ರೂಪಾಯಿಗಳು. 173 ಸಂಸ್ಥೆಗಳಿಂದ ಇದುವರೆವಿಗೂ 184 ಜಿಡಿಆರ್ ಪ್ರಸ್ತಾವನೆಗಳ ಪೈಕಿ ಸರ್ಕಾರ 100ಕ್ಕೆ ಒಪ್ಪಿಗೆ ಕೊಟ್ಟಿದೆ. 15 ಸಂಸ್ಥೆಗಳಿಗೆ ತಲಾ 100 ಮಿಲಿಯನ್ ಡಾಲರ್ ಯೂರೋ ಹಣ ಎತ್ತಲು ಅನುಮತಿ ನೀಡಲಾಗಿದೆ. ವಿಳಂಬದಿಂದ 10 ಸಂಸ್ಥೆಗಳು ಅವಕಾಶ ಕಳೆದುಕೊಂಡಿವೆ. ಡನ್‌ಲಪ್‌ಸಂಸ್ಥೆ 'ಅನರ್ಹ' ಎಂದು ನಿರಾಕರಿಸಲಾಗಿದೆ. ಎರಡು ಸಂಸ್ಥೆಗಳು ಸ್ವಇಚ್ಛೆಯಿಂದ ನಿರ್ಗಮಿಸಿದುವು. ವಿದೇಶ್ ಸಂಚಾರ್ ನಿಗಮದ ಒಂದು ಬಿಲಿಯನ್ ಡಾಲರ್‌ಗಳ ಜಿಡಿಆರ್ ಕಲಾಪಗಳನ್ನು ಸರ್ಕಾರವೇ ರದ್ದುಪಡಿಸಿತು. ಜಿಡಿಆರ್ ನಿಯಮಾವಳಿಗೆ ಮುಂಚೆ ಪ್ರಮುಖ ಸಂಸ್ಥೆಗಳು ಅಧಿಕಮೌಲ್ಯದ ಸಿಹಿಯುಣ್ಣೊಂಡವು. ಮಧ್ಯಮ ಸಂಸ್ಥೆಗಳು ಸೋಡಿ ವ್ಯಾಪಾರದಿಂದ ತಲೆ ಎತ್ತಿದುವು. ಐಟಿಸಿ ಎಸ್ಸಾರ್ ಗುಜರಾತ್ ಸಂಸ್ಥೆಗಳು ಯಾವ ರೀತಿಯ ಉಲ್ಲಂಘನೆ ಇಲ್ಲದೆ ಆದರ್ಶ ಸಂಸ್ಥೆಗಳಾಗಿ ವಿದೇಶೀಯರಿಂದ 'ಶಭಾಶ್' ಪಡೆದವು.

ಯೂರೊ ಹಣ ಹಾಗೂ ನೇರ ವಿದೇಶಿ ಹೂಡಿಕೆಯಿಂದ ಬಂದ ಹಣ ಮಹಾಪೂರದ ರೂಪ ತಾಳುವ ಪರಿಸ್ಥಿತಿ ಉದ್ಭವಿಸಿತು. ಈ ಹಣಕ್ಕೆ ತಕ್ಕಂಥಾ ಚರಾಸ್ತಿ ಸೃಷ್ಟಿ ಆಗುವ ನಂಬಿಕೆ ದೂರವಾಯಿತು. ನಿಯಮಾವಳಿ ಇದ್ದೂ ಪರಿಸ್ಥಿತಿ ಕೈಮೀರುವಂತೆ ಗೋಚರಿಸಿತು. ಯೂರೊ ಕಲಾಪ ಲಂಗುಲಗಾಮಿಲ್ಲದ ಹುಚ್ಚುಕುದುರೆ ಆಯಿತು. ಸರ್ಕಾರ ಚುರುಕಾಯಿತು. ಈ ಮಹಾಪೂರದಿಂದಾಗುವ ಘೋರ ಪರಿಣಾಮವನ್ನು ತಪ್ಪಿಸಲು ಸರ್ಕಾರ "ಜಿಡಿಆರ್ ಹಣವನ್ನು ತಕ್ಷಣವೇ ಭಾರತಕ್ಕೆ ರವಾನಿಸಕೂಡದು. ಐರೋಪ್ಯ ಪೇಟೆಯಲ್ಲೇ ಅದನ್ನು ತೊಡಗಿಸಬಹುದು. ಈಗಾಗಲೇ ಬಂದಿರುವ ಯೂರೋ ಹಣವನ್ನು ಒಂದು ವರ್ಷದ ಅವಧಿ ಇರುವ ಖಜಾನೆ ಹುಂಡಿಯಲ್ಲಿ ಅಥವ ರಿಜರ್ವ್ ಬ್ಯಾಂಕ್ ಸೂಚಿಸಿರುವ ಬೇರೆ ಬೇರೆ ನಿರ್ದಿಷ್ಟ ಸಂಲೇಖಗಳಲ್ಲಿ ತೊಡಗಿಸಬೇಕು" ಎಂದು ಸುಗ್ರೀವಾಜ್ಞೆ ಹೊರಡಿಸಿತು. ಇದರಲ್ಲಿ ಸಂಭವಿಸುವ ನಷ್ಟವನ್ನು ತಡೆಗಟ್ಟಲು ಮುಕ್ತಪೇಟೆ ಸ್ವಚ್ಛಗೊಳಿಸುವ ವಿಧಾನವನ್ನು ಅಳವಡಿಸಿ ನಿರ್ಬಂಧಗಳ ಸರಪಳಿಯನ್ನು ಉದ್ದಮಾಡಿತು.

(i) ಬಂಡವಾಳ ಜಗಿತವನ್ನು ತಪ್ಪಿಸಲು ಇಲ್ಲಿಯ ಶೇರುಗಳನ್ನು ಜಿಡಿಆರ್ ಶೇರುಗಳಿಗೆ ಪರಿವರ್ತಿಸುವಂತಿಲ್ಲ.

(ii) ನಿಯಮಾವಳಿಯಲ್ಲಿ ಸೂಚಿಸಿರುವ ಉದ್ದೇಶಗಳಿಗೆ ಮಾತ್ರ ಯೂರೊ ಹಣವನ್ನು ಉಪಯೋಗಿಸಬೇಕು. ಆಂತರಿಕ

ಋಣಪರಿಹಾರಕ್ಕಲ್ಲ. ರಿಲೈಯೆನ್ಸ್‌ನಂಥ ಒಂದೆರಡು ಸಂಸ್ಥೆಗಳು ಸುಮಾರು 3,000 ಕೋಟಿ ರೂಪಾಯಿಗಳಷ್ಟು ಯೂರೊ ಹಣ ವನ್ನು ಆಂತರಿಕ ಋಣವಿಮೋಚನೆಗಾಗಿ ಉಪಯೋಗಿಸಿರುವು ದನ್ನು ಐರೋಪ್ಯ ಪೇಟೆ ಮೂಲಗಳು 'ದುರುಪಯೋಗ' ಎಂದು ಆಕ್ಷೇಪಿಸಿವೆ.

**ಜಿಡಿಆರ್ ಪತನ**

ಜಿಡಿಆರ್ ಕಲಾಪಗಳ ಇಳಿಮುಖಕ್ಕೆ ಸ್ಥಳೀಯ ಬೆಲೆಗಳ ಚಲನ ಹಾಗೂ ಇತರ ಆಂತರಿಕ ಕಾರಣಗಳಿವೆ. ನಮ್ಮ ಸಂಸ್ಥೆಗಳು ಅಧಿಮೌಲ್ಯದ ಆಸೆಯಿಂದ ಬೆಲೆಗಳನ್ನು ಗಗನಕ್ಕೇರಿಸಿ ಎಡವಿದುವು. 'ಇದರಲ್ಲಿ ನಿಸ್ಸೀಮರು' ಎಂದು ವಿದೇಶೀಯರು ಗೇಲಿಮಾಡಿದರು. ವಿದೇಶ್ ಸಂಚಾರ ನಿಗಮ ಇದಕ್ಕೆ ಒಂದು ಉತ್ತಮ ನಿದರ್ಶನ. ಕೆಲವು ಸಂಸ್ಥೆಗಳು ಸ್ಥಳೀಯ ಪೇಟೆಯಲ್ಲಿ ಎತ್ತಿರುವ ಬಂಡವಾಳ ಕ್ಕಿಂತ 2-3ರಷ್ಟು ಅಧಿಕಪ್ರಮಾಣದಲ್ಲಿ ಯೂರೊ ಹಣ ಎತ್ತಲು ಹೋಗಿ ಅಧಿಮೌಲ್ಯ—ಸೋಡಿ ಬೆಲೆಗಳ ಹೊಯ್ದಾಟದಲ್ಲಿ ಸಿಕ್ಕಿ ತತ್ತರಿಸಿದುವು. ಇಬ್ಬರ ಜಗಳ ಮೂರನೆಯವನಿಗೆ ಲಾಭ ಎಂಬಂತೆ ಈ ಹೊಯ್ದಾಟದಲ್ಲಿ ಅಭಿಕರಣಸಂಸ್ಥೆಗಳು ಕಮಿಶನ್/ಸೇವಾ ಶುಲ್ಕ ರೂಪದಲ್ಲಿ 10 ಮಿಲಿಯನ್ ಡಾಲರ್‌ಗಳಷ್ಟು ಲಾಭ ಗಳಿಸಿದುವು.

ಅಧಿಕೃತವಾಗಿ ಲಂಡನ್ನಿನಲ್ಲಿ ಪಟ್ಟೀಕರಿಸುವುದಕ್ಕೆ ಮುಂಚೆ ಭಾರತೀಯ ಸಂಸೆಗ್ಗಳು ಲಗ್ಸೆಂಬರ್ಗ್‌ನಲ್ಲಿ ಪಟ್ಟೀಕರಿಸಿತ್ತು. ಆದರೆ ಅಲ್ಲಿ ಬಿರುಸಿನ ವ್ಯಾಪಾರವಿಲ್ಲದ್ದರಿಂದ ಭಾರತೀಯ ಜಿಡಿಆರ್ ವ್ಯಾಪಾರ ಅಷ್ಟಾಗಿ ಗೋಚರಿಸಲಿಲ್ಲ. ರಸ್ತೆಪ್ರಚಾರದಿಂದ ಕೆಲವು ಸಂಸ್ಥೆಗಳು ವ್ಯಾಪಾರವನ್ನು ಕುದುರಿಸಿಕೊಂಡವು. ಆದರೆ ಸ್ಪರ್ಧಿಗಳ ಹೊಡೆತವನ್ನು ತಾಳಲಾಗಲಿಲ್ಲ. ನಮ್ಮವು ಇವೆಲ್ಲವನ್ನೂ ಸುಮ್ಮನೆ ವೀಕ್ಷಿಸುವಂತಾಯ್ತು. ಅಕ್ಟೋಬರ್ 94ರಲ್ಲಿ ಅಧಿಕೃತ ವಾಗಿ ಲಂಡನ್ನಿನಲ್ಲಿ ಪಟ್ಟೀಕರಿಸಲಾಯಿತು.ಪಟ್ಟೀಕರಣದ ವಿಳಂಬಕ್ಕೆ ಈ ಕೆಳಕಂಡ ಕಾರಣಗಳನ್ನು ಕೊಡಲಾಗಿದೆ :

(i) ದುಬಾರಿ ಶುಲ್ಕ—ನೋಂದಾವಣೆ ಶುಲ್ಕ4,000 ಪೌಂಡ್ ಗಳು, ವಾರ್ಷಿಕ ಶುಲ್ಕ 2000 ಪೌಂಡುಗಳು.

(ii) ಲಂಡನ್ ಪೇಟೆಯ ಪಟ್ಟೀಕರಣದ ಮಾನಕಗಳು (ಜಿ.ಎ. ಎ. ಪಿ.)—[ಸರ್ವಸ್ವೀಕೃತವಾದ ಲೆಕ್ಕ ಪದ್ಧತಿ ಸೇರಿ] ಭಾರತದ ಎಲ್ಲಾ ಸಂಸ್ಥೆಗಳಿಗೆ ಎಟುಕುವಂಥಾದ್ದಲ್ಲ.

(iii) ಶೇರುಪೇಟೆ ಸಂಬಂಧವಿಲ್ಲದೆ ಕೇವಲ ದೂರವಾಣಿ ಮಾಹಿತಿಯಿಂದಲೇ ತಜ್ಞರು ಕಲಾಪವನ್ನು ನಿಭಾಯಿಸುತ್ತಿದ್ದರು.

**ಬಾಹ್ಯಾಂಶಗಳು**

ವಿಶ್ವ ಪೇಟೆಯಲ್ಲಿ ಜರುಗುವ ಪ್ರಸಂಗಗಳು ಯಾವ ರೀತಿಯಲ್ಲಿ ದೇಶೀಯ ಪೇಟೆಗಳ ಮೇಲೆ ಪರಿಣಾಮ ಬೀರುವುವು ಎಂಬುದಕ್ಕೆ ಅಮೆರಿಕದಲ್ಲಿ ಬಡ್ಡಿದರದ ಹೆಚ್ಚಳ ಹಾಗೂ ಮೆಕ್ಸಿಕೊ ಬಿಕ್ಕಟ್ಟು ಒಳ್ಳೆಯ ನಿದರ್ಶನಗಳಾಗಿವೆ. ಅಮೆರಿಕದ ಬಡ್ಡಿದರದ ಹೆಚ್ಚಳದಿಂದ ಫೆಡರಲ್ ಬಾಂಡ್‌ಗಳಿಗೆ ಅಧಿಕ ಬೇಡಿಕೆ ಉಂಟಾಗಿ ಜಿಡಿಆರ್ ಹೂಡಿಕೆದಾರರ ಆಸಕ್ತಿ ಕಡಿಮೆ ಆಗಿದೆ. ಸೆಪ್ಟೆಂಬರ್ 94ರಿಂದ ಜಿಡಿಆರ್ ಬೆಲೆ ಕುಸಿಯುತ್ತಲೇ ಇದೆ. ಜಿಡಿಆರ್ ಸೂಚ್ಯಂಕ ಅಂದು 125 ಇದ್ದದ್ದು ಮಾರ್ಚ್‌ನಲ್ಲಿ 85 ಆಗಿ ಮತ್ತೆ ಏರಿಲ್ಲ. ಅಂದರೆ ಪ್ರತಿ 100 ಡಾಲರ್ ಜಿಡಿಆರ್‌ನ್ನು ಇಂದು 70 ಡಾಲರಿಗೆ ಮಾರ ಬೇಕಾಗಿದೆ. ಇಂಡಿಯನ್ ಪೆಟ್ರೊ ಕೆಮಿಕಲ್ಸ್ ಸಂಸ್ಥೆಯದು 1994 ಕೊನೆಯ ಕಲಾಪ. ಜನವರಿ–ಫೆಬ್ರವರಿಯಲ್ಲಿ ಯಾವ ಕಲಾಪವೂ ವರದಿಯಾಗಿಲ್ಲ. ಮಾರ್ಚ್‌ನಲ್ಲಿ ಅಶೋಕ್ ಲೇಲ್ಯಾಂಡ್ ವರದಿ ಯಾಗಿದೆ. ಹೋದ ವರ್ಷ ಇದೇ ಅವಧಿಯಲ್ಲಿ 11 ವ್ಯವಹಾರಗಳ ವರದಿಯಾಗಿತ್ತು. ಈಗ ಜಿಡಿಆರ್ ಗಿರಾಕಿಗಳು ಎಡಿಆರ್ (ಅಮೆರಿಕನ್ ಡಿಪಾಸಿಟರಿ ರಸೀತಿ)ಗೆ ವಾಲಿದ್ದಾರೆ. ಎಡಿಆರ್‌ನ ಕೇಂದ್ರಸ್ಥಾನ ನ್ಯೂಯಾರ್ಕ್. ಅಮೆರಿಕಾದ ಇಡೀ ಹೂಡಿಕೆದಾರರ ಸಮೂಹ ಎಡಿಆರ್‌ಗೆ ಸೀಮಿತವಾಗಿದೆ. ಆದರೆ ಜಿಡಿಆರ್ ಪೇಟೆ ಕೇವಲ 1500 ಅರ್ಹ ಸಾಂಸ್ಥಿಕ ಕೊಳ್ಳುವವರಿಗೆ ಮಾತ್ರ ಸೀಮಿತ ವಾಗಿದೆ. ಮೆಕ್ಸಿಕೊ ಬಿಕ್ಕಟ್ಟಿನಿಂದ ಹೂಡಿಕೆದಾರರು ಎರಡೂ ಪೇಟೆ ಗಳಿಂದ ಕಾಲ್ತೆಗೆಯುತ್ತಿದ್ದಾರೆ.

ಭಾರತದಲ್ಲಿ 'ಎ' ಮತ್ತು 'ಬಿ' ಶ್ರೇಣಿಯ ಪ್ರತಿಭೂತಿಗಳು ಉದ್ಭವಿಸಿವೆ. ಬ್ಲ್ಯೂಚಿಪ್ ಸಂಸ್ಥೆಗಳು 'ಎ' ಶ್ರೇಣಿಯಲ್ಲಿ, ಭಾರಿ ಸೋಡಿ ಬಿಟ್ಟು ಮಾರುವ ಮಧ್ಯಮ ವರ್ಗದ ಸಂಸ್ಥೆಗಳು 'ಬಿ' ಶ್ರೇಣಿಯಲ್ಲಿ ಇವೆ. ಸುಲಭದರದಲ್ಲಿ ಯೂರೊ ಹಣ ಎತ್ತುವ ಸೌಲಭ್ಯವನ್ನು ಹೂಡುವವರಿಗೆ ವರ್ಗಾಯಿಸದೆ ಸಂಸ್ಥೆಗಳು ತಾವೇ ಅನುಭವಿಸಿರುವುದು ಆಕ್ಷೇಪಣೀಯ.

ಭಾರತೀಯ ಸಂಸ್ಥೆಗಳಿಗೆ ವಿಶ್ವಪೇಟೆಯಲ್ಲಿ ಸಾಕಷ್ಟು ನುರಿತ ಅನುಭವವಿಲ್ಲ. ಇಂದಿನ ಉದಾರ ಬಡ್ಡಿನೀತಿ ಹಾಗೂ ಉದ್ಯಮಗಳ ದೀರ್ಘಪ್ರಾರಂಭಿಕ ಅವಧಿ, ತೆರಿಗೆ ಸುಲಿಗೆ ವಿದೇಶೀಯರಿಗೆ ಆಕರ್ಷ ಕವಾಗಿಲ್ಲ. ಜಿಡಿಆರ್ ಹಣವನ್ನು ಭಾರತಕ್ಕೆ ತರಕೂಡದು ಎಂದು ಸರ್ಕಾರ ಹೇಳಿತೇ ವಿನಾ ಅಲ್ಲಿ ಅದನ್ನು ಯಾವ ರೀತಿ ತೊಡಗಿಸ ಬೇಕು ಎಂಬುದರ ಬಗ್ಗೆ ಸರಿಯಾದ ಮಾರ್ಗದರ್ಶನವಿಲ್ಲ ಸರ್ಕಾರದ ನಿಬಂಧನದಿಂದ ದೇಶದ ಅರ್ಥವ್ಯವಸ್ಥೆಗೆ ಹಣ ತೊಡಗಿಸಲು ಸಾಧ್ಯವಾಗುತ್ತಿಲ್ಲ. ಇದರಿಂದ ದೇಶದ ಹಣಕಾಸು ಸೇವಾಸಂಸ್ಥೆಗಳ ವ್ಯಾಪಾರಕ್ಕೆ ಧಕ್ಕೆ ಉಂಟಾಗಿದೆ. ಜಿಡಿಆರ್ ಶೇರಿನ ಹಕ್ಕುಬಾಧ್ಯತೆ ಹಾಗೂ ಇದರಿಂದ ಪ್ರವರ್ತಕ-ನಿರ್ದೇಶಕರ ಆಸಕ್ತಿ ಕಡಿಮೆ ಆಗಿರು ವುದರ ಬಗ್ಗೆ ವಾದವಿವಾದಗಳು ಉದ್ಭವಿಸಿದೆ. ಥಾಯ್‌ಲ್ಯಾಂಡ್, ಮಲೇಷಿಯಾ, ಇಂಡೋನೇಷಿಯಾ ಹಾಗೂ ಇತ್ತೀಚಿನ ವರದಿ ಗಳ ಪ್ರಕಾರ ಪಾಕಿಸ್ತಾನ ಪ್ರಮುಖ ಪಟುಗಳಾಗಿವೆ. ಇವು ಗಳ ವ್ಯಾಪಾರ ಭಾರತದ ಸ್ಪರ್ಧಾಸಾಮರ್ಥ್ಯದ ಮೇಲೆ ಪರಿಣಾಮ ಬೀರುವುದಾಗಿದೆ. ಇವೆಲ್ಲವನ್ನು ಗಮನಿಸಿದ ಸಿ.ಆರ್.ಬಿ. ಕ್ಯಾಪಿಟಲ್ಸ್‌ನ ಮುಖ್ಯಸ್ಥ ಎಸ್.ಆರ್. ಜೈನ್ ಒಂದೇ ಮಾತಿನಲ್ಲಿ 'ಅದು ಪಲ್ಟಿ ಹೊಡೆದು ಅಚೇತರಿಕೆಯ ಸ್ಥಿತಿಯಲ್ಲೇ ಮುಂದುವರೆ ಯುತ್ತಿದೆ. ಇದುವರೆಗೂ ಯಾವ ಸ್ವಾಸ್ಥ್ಯಚೇತರಿಕೆಯೂ ಕಂಡು ಬಂದಿಲ್ಲ.' ಎಂದು ಜಿಡಿಆರ್‌ನ ಪರಿಸ್ಥಿತಿಯನ್ನು ಗುರುತಿಸಿ ದ್ದಾರೆ.

[6ನೇ ಪುಟ ನೋಡಿ]

# ಮುಗುಳು ನಗೆಯೊಡನೆ ಸೇವೆ

ಜಯಂತಿ ಮನೋಹರ

**ಸೇವೆ ಮತ್ತು ಸೌಜನ್ಯಗಳು ಒಂದೇ ನಾಣ್ಯದ ಎರಡು ಬದಿಗಳಂತೆ. ಒಂದನ್ನು ಬಿಟ್ಟು ಇನ್ನೊಂದು ಇರುವುದಾದರೆ ಆಗ ನಾಣ್ಯಕ್ಕೆ ಅಸ್ತಿತ್ವವಿಲ್ಲ. ಬ್ಯಾಂಕಿನ ಮುಖ್ಯ ಕಲಾಪವೆಂದರೆ ಸೇವೆಯೇ. ಇದರೊಂದಿಗೆ ಸೌಜನ್ಯವೂ ಇಲ್ಲದಿದ್ದರೆ ಬ್ಯಾಂಕಿಗೆ ಎಂಥ 'ಅಸ್ತಿತ್ವ'? ಸೇವೆಗೆ ಸೌಜನ್ಯವನ್ನು ಕೂಡಿಸಿ ಬ್ಯಾಂಕಿಗೆ ಮತ್ತೆ 'ಅಸ್ತಿತ್ವ' ದೊರಕಿಸಿಕೊಡುವುದು ಹೇಗೆ?**

ವ್ಯಾಪಾರ–ವಹಿವಾಟು ನಡೆಯುವ ಪ್ರತಿಯೊಂದು ಕ್ಷೇತ್ರದಲ್ಲಿಯೂ 'ಸೇವೆ' ಮುಗುಳುನಗೆಯಿಂದ ಕೂಡಿರಬೇಕೆಂಬ ಅಪೇಕ್ಷೆ ಗ್ರಾಹಕರಲ್ಲಿರುವುದು ಸಹಜವೇ ಆಗಿದೆ. ನಮ್ಮ ದೈನಂದಿನ ಅಗತ್ಯಗಳಿಗೆ ಬೇಕಾದ ಪದಾರ್ಥಗಳನ್ನು ಕೊಳ್ಳುವಾಗಲೂ ನಾವು ಈ ಸೌಜನ್ಯವನ್ನು ಅಪೇಕ್ಷಿಸುತ್ತೇವೆ. ಆಕರ್ಷಕ ಮಾತು ಹಾಗೂ ಸೌಜನ್ಯಪೂರ್ಣ ನಡೆವಳಿಕೆಗಳಿಗೆ ಮಾರುಹೋಗಿ ವ್ಯಾಪಾರಿ ಕೇಳಿದಷ್ಟು ಬೆಲೆಯನ್ನು ಕೊಟ್ಟು ಕೊಳ್ಳುವುದಷ್ಟೇ ಅಲ್ಲದೆ, ನಮ್ಮ ಹಲವಾರು ಸ್ನೇಹಿತರನ್ನು ಅವನ ಬಳಿಗೆ ಕಳುಹಿಸುತ್ತೇವೆ. ಇಲ್ಲಿ ವ್ಯಾಪಾರಿಯು ತನ್ನ ಉದ್ದಿಮೆಯಲ್ಲಿ ಸ್ವಂತ ಲಾಭಕ್ಕಾಗಿ ಹಣ ಹೂಡುತ್ತಾನೆ ಹಾಗೂ ಆ ಲಾಭವನ್ನು ಇಮ್ಮಡಿ-ಮುಮ್ಮಡಿ ಹೆಚ್ಚಿಸುವುದಕ್ಕೆ ಬೇಕಾದ ಮುಗುಳುನಗೆಯೊಡನೆ ಸೇವೆಯನ್ನು ಕೊಡುವ ಕೌಶಲವನ್ನು ಅರಿತಿದ್ದಾನೆ. ಇಲ್ಲಿ, ಮುಗುಳುನಗೆಯೆಂದರೆ, ಗಗನಯಾನದಲ್ಲಿ ಗಗನಸಖಿಯರು ಕೊಡುವ ಕೃತಕವಾದ ನಗೆಯಲ್ಲ. ತಮ್ಮಲ್ಲಿಗೆ ಬಂದ ಗ್ರಾಹಕರನ್ನು ಪದೇಪದೇ ಬರಮಾಡಿಕೊಳ್ಳಬಹುದಾದಂತಹ ಸೌಜನ್ಯಪೂರ್ಣವಾದಂಥ 'ಮುಗುಳುನಗೆ'.

ಬ್ಯಾಂಕಿಂಗ್ ಕ್ಷೇತ್ರದಲ್ಲಿಯೂ ಇಂತಹುದೇ ಸೌಜನ್ಯಪೂರ್ಣ ನಡೆವಳಿಕೆಯನ್ನು ಗ್ರಾಹಕರು ಅಪೇಕ್ಷಿಸುತ್ತಾರೆ. ಅವರ ಈ ಅಪೇಕ್ಷೆ ಇಂದು ನಿನ್ನೆಯದಲ್ಲ, ಎಂದಿನಿಂದ 'ಸೇವೆಯು' ಪ್ರಾರಂಭವಾಯಿತೋ ಅಂದಿನಿಂದಲೂ ಇರುವಂತಹುದೇ. ಆದರೆ, ಗ್ರಾಹಕರ ಈ ಅಪೇಕ್ಷೆಗೆ ಮಾತಿನ ಚಾಲನೆ ಸಿಕ್ಕಿದ್ದು ಮಾತ್ರ ಬ್ಯಾಂಕುಗಳ ರಾಷ್ಟ್ರೀಕರಣವಾದ ನಂತರವೇ. ಬ್ಯಾಂಕುಗಳಲ್ಲಿ ದೊರೆಯುವ ಸೇವೆಗಳ ವೈವಿಧ್ಯ ಹಾಗೂ ಸಂಖ್ಯೆ ಹೆಚ್ಚಿದಂತೆಲ್ಲಾ ಅವರ ಈ ಅಪೇಕ್ಷೆಯ ಮಟ್ಟವೂ ಏರುತ್ತಲೇ ಹೋಗುತ್ತಿದೆ. ಕಳೆದೆರಡು ದಶಕಗಳಿಂದಂತೂ ಬ್ಯಾಂಕಿನಲ್ಲಿ ದೊರೆಯುವ ಸೇವೆಯು ಸರಕಾರದ ವಲಯಗಳಿಂದ ಹಿಡಿದು ಪತ್ರಿಕಾವಲಯದ ವರೆಗೂ ಅತ್ಯಂತ ಹೆಚ್ಚಿನ ಚರ್ಚೆಗೆ ಮತ್ತು ಟೀಕೆಗೆ ಒಳಗಾಗಿದೆ. ಇಲ್ಲಿ ದೊರೆಯುತ್ತಿರುವ ಸೇವೆಯ ಗುಣಮಟ್ಟದ ಬಗ್ಗೆ ಚಿಂತನೆ ಹರಿಸಲು ಸರಕಾರ 80ರ ದಶಕದಲ್ಲಿ ನಿಯೋಜಿಸಿದ ರಾಷ್ಟ್ರೀಯ ಅನ್ವಿತ ಆರ್ಥಿಕ ಸಂಶೋಧನಾ ಪರಿಷತ್ತು (ನ್ಯಾಷನಲ್ ಕೌನ್ಸಿಲ್ ಆಫ್ ಅಪ್ಲೈಡ್ ಎಕನಾಮಿಕ್ ರಿಸರ್ಚ್—ಎನ್‌ಸಿಎಇಆರ್) ಹಾಗೂ ರಾಷ್ಟ್ರೀಯ ಬ್ಯಾಂಕ್ ವ್ಯವಸ್ಥಾಪನ ಸಂಸ್ಥೆ (ದಿ ನ್ಯಾಷನಲ್ ಇನ್‌ಸ್ಟಿಟ್ಯೂಟ್ ಆಫ್ ಬ್ಯಾಂಕ್ ಮ್ಯಾನೇಜ್‌ಮೆಂಟ್—ಎನ್‌ಐಬಿಎಂ) ಎನ್ನುವ ಸಂಸ್ಥೆಗಳು ಈ ದಿಸೆಯಲ್ಲಿ ವ್ಯಾಪಕವಾದ ಸರ್ವೇಕ್ಷಣೆ ನಡೆಸಿದವು. ಇದರ ಪರಿಣಾಮವಾಗಿ ಬ್ಯಾಂಕಿನಲ್ಲಿ ಶೇ. 90ರಷ್ಟು ಗ್ರಾಹಕರಿಗೆ ತೃಪ್ತಿ ಸಿಕ್ಕಿದೆ ಎನ್ನುವ ಅಂಶ ತೋರಿದ್ದರೂ ದಿನದಿಂದ ದಿನಕ್ಕೆ ಹೆಚ್ಚುತ್ತಿರುವ ಟೀಕೆಗಳಿಗೆ ಕಾರಣಗಳನ್ನು ಹುಡುಕುವ ಪ್ರಯತ್ನವನ್ನು ಮಾಡೋಣ.

### ವಿಸ್ತರಣೆಯ ಪರಿಣಾಮ

ಬ್ಯಾಂಕುಗಳು ರಾಷ್ಟ್ರೀಕರಣವಾದ ಮೇಲೆ ತಮ್ಮ ಮೂಲಭೂತ ಧೋರಣೆಗಳಲ್ಲಿ ಬಹಳಷ್ಟು ಬದಲಾವಣೆಗಳನ್ನು ಮಾಡಿಕೊಳ್ಳಬೇಕಾಯಿತು. ಅಂದಿನ ಸರಕಾರ ತಳೆದಿದ್ದ ನಿಲುವಿಗೆ ಅನುಸಾರವಾಗಿ ತಮ್ಮ ಶಾಖೆಗಳ ಸಂಖ್ಯೆಯನ್ನು ಹೆಚ್ಚಿಸುತ್ತಾ, ಸರಕಾರದ ಆರ್ಥಿಕ ಹಾಗೂ ಸಾಮಾಜಿಕ ಯೋಜನೆಗಳಿಗೆ ಚಾಲನೆಯನ್ನು ಕೊಡುವಲ್ಲಿ ಪ್ರಮುಖ ಪಾತ್ರವನ್ನು ವಹಿಸುತ್ತಾ, ಸಮಾಜದಲ್ಲಿನ ಆರ್ಥಿಕ ಅಸಮತೆಯನ್ನು ತೊಡೆದುಹಾಕಲು ಹಲವು ಹತ್ತು ಬಗೆಗಳಲ್ಲಿ ಕಾರ್ಯಪ್ರವೃತ್ತವಾದುವು. ಕಾರ್ಖಾನೆ, ವಿಶ್ವವಿದ್ಯಾನಿಲಯ, ಸರಕಾರೀ ಅರೆಸರಕಾರೀ ವಲಯಗಳ ಕಚೇರಿ ಸಿಬ್ಬಂದಿಗೆ ವೇತನ ಬಟವಾಡೆ, ನಿವೃತ್ತಿವೇತನವನ್ನು ಕೊಡುವುದು, ವಿದ್ಯುಚ್ಛಕ್ತಿ ಬಿಲ್ಲುಗಳ ಪಾವತಿಗಳನ್ನು ಸ್ವೀಕರಿಸುವುದರಿಂದ ಹಿಡಿದು ಸಮಾಜದಲ್ಲಿ ಬಡತನದ ರೇಖೆಯಿಂದ ಕೆಳಗಿರುವ ಜನರನ್ನು ಗುರುತಿಸಿ ಅವರಿಗೆ ಸಾಲಗಳನ್ನು ಕೊಟ್ಟು ಸ್ವಾವಲಂಬಿಗಳನ್ನಾಗಿ ಮಾಡುವ ಹೊಣೆಯನ್ನು ಬ್ಯಾಂಕುಗಳು ಹೊರಬೇಕಾಯಿತು. ಶಾಖಾ ವಿಸ್ತರಣೆಯಿಂದಾಗಿ ಹಾಗೂ ಸರಕಾರದ ಪರವಾಗಿ ನಡೆಸಿದ ಸಾಲಮೇಳಗಳಂತಹ ಕಾರ್ಯಕ್ರಮಗಳಿಂದಾಗಿ, 80ರ ದಶಕದಲ್ಲಿ ಬ್ಯಾಂಕಿನ ಸೇವಾ ವ್ಯಾಪ್ತಿಗೆ ಬರುವವರ ಸಂಖ್ಯೆ ವರ್ಷದಿಂದ ವರ್ಷಕ್ಕೆ ಅತಿ ವೇಗದಿಂದ ಏರತೊಡಗಿತು. ಆದರ ಪರಿಣಾಮವಾಗಿ, ಉಂಟಾದ ಕೆಲಸದ ಒತ್ತಡವನ್ನು ನಿರ್ವಹಿಸಲು ಬ್ಯಾಂಕಿನ ಸಿಬ್ಬಂದಿಯನ್ನು ಸಿದ್ಧಗೊಳಿಸುವ ಪ್ರಯತ್ನಗಳು ನಡೆದವಾದರೂ ಅದರಲ್ಲಿ ಹೆಚ್ಚಿನ ಸಫಲತೆಯನ್ನು ಕಾಣಲಿಲ್ಲ. ಸಾಮಾನ್ಯವಾಗಿ ನಮ್ಮ ಬ್ಯಾಂಕುಗಳ ಶಾಖೆಗಳಲ್ಲಿ ತಿಂಗಳ ಮೊದಲ ವಾರದಲ್ಲಿ ಕಂಡುಬರುವ ದೃಶ್ಯವನ್ನು ಇಲ್ಲಿ ಕೊಡುತ್ತಿದ್ದೇನೆ.

ನಿವೃತ್ತಿವೇತನದಾರರ ಜೊತೆಗೆ, ಆ ಶಾಖೆಯಲ್ಲಿ ಯಾವುದಾದರೂ ಕಚೇರಿಯ ವೇತನ ಬಟವಾಡೆಯ ವ್ಯವಸ್ಥೆ ಇದ್ದರೆ, ಆ ವೇತನ ದಾರರೂ ಸೇರಿ ಒಮ್ಮೆಗೇ ಬ್ಯಾಂಕಿಗೆ ದಾಳಿ ಇಡುವಾಗ, ನಾವು ಆದ್ಯಗಮನಹರಿಸಬೇಕಾದ ನಮ್ಮ ಠೇವಣಿದಾರರೂ ಅವರೊಂದಿಗೆ ಸೇರಿಹೋಗಿ ಅವರು ನಮ್ಮ ಮುಂಗಟ್ಟೆಗಳ ಮುಂದಿರುವ ಉದ್ದದ ಸರದಿಯಲ್ಲಿ ಹೆಚ್ಚಿನ ಸಮಯವನ್ನು ಕಳೆಯಬೇಕಾಗು ತ್ತದೆ. ಇದರಿಂದಾಗಿ ಬಹಳಷ್ಟು ಗ್ರಾಹಕರ ದೂರುಗಳು ಸೃಷ್ಟಿ ಯಾಗುತ್ತವೆ. ಬ್ಯಾಂಕಿನೊಳಗೆ ಬರುವ ಗ್ರಾಹಕರಿಗೆ ತಾವು ಯಾರ ಮುಂದೆ ಮೊದಲು ಬಂದು ನಿಲ್ಲುತ್ತಾರೋ, ಅವರೇ ಬ್ಯಾಂಕಿನ ಪ್ರತಿನಿಧಿ. ಸಾಮಾನ್ಯವಾಗಿ ಗ್ರಾಹಕರು ಮೊದಲು ಕಾಣುವುದು ಶಾಖೆಗಳ ಮುಂಗಟ್ಟೆಯಲ್ಲಿರುವ ಸಿಬ್ಬಂದಿಯನ್ನು. ತಮ್ಮ ಉಳಿತಾಯ ಖಾತೆಯ ಪಾಸ್‌ಪುಸ್ತಕವನ್ನು ಕೊಟ್ಟು ಅದರಲ್ಲಿ ತಮಗೆ ಬರಬೇಕಾದ ಹಣದ ಪಾವತಿಯ ನಮೂದು ಆಗಿರದಿದ್ದಲ್ಲಿ ಅದಕ್ಕೆ ಬೇರೆ ಏನೇ ಕಾರಣಗಳಿದ್ದರೂ, ಗ್ರಾಹಕರ ಅಸಂತುಷ್ಟಿ ಯನ್ನು ಆ ಮುಂಗಟ್ಟೆಯ ಸಿಬ್ಬಂದಿ ಎದುರಿಸಬೇಕಾಗುತ್ತದೆ. ಇಲ್ಲಿ ಸಿಬ್ಬಂದಿಯ ವೈಯಕ್ತಿಕವಾದ ಸೌಜನ್ಯಪೂರ್ಣವಾದ ನಡೆವಳಿಕೆಯೇ ಅವರ ಬಂಡವಾಳವಾಗಬೇಕು. ಮುಗುಳುನಗೆಯಿಂದ ಕೂಡಿದ ವ್ಯವಹಾರದಿಂದ ಎಂತಹ ಅಸಂತುಷ್ಟ ಗ್ರಾಹಕನನ್ನಾದರೂ ಮನ ಒಲಿಸಿ, ಯಥಾರ್ಥ ವಿವರಣೆಯನ್ನು ಕೊಡಬಹುದು. ಆದರೆ ಅನೇಕ ವೇಳೆ ಹಾಗಾಗುವುದಿಲ್ಲ. ಮುಂಗಟ್ಟೆಯಲ್ಲಿರುವ ಬಹುತೇಕ ಸಿಬ್ಬಂದಿ ಪ್ರತಿದಿನವೂ ಬ್ಯಾಂಕಿನೊಳಗೆ ಕಾಲಿಟ್ಟ ಕ್ಷಣದಿಂದಲೇ ಮುಗುಳುನಗೆಯನ್ನು ಮರೆಯುತ್ತಾರೆ. ತನಗೆ ವಿಧಿಸಿದ ಕಾರ್ಯ ವನ್ನಷ್ಟೇ, ಅಂದರೆ ಉಳಿತಾಯ ಖಾತೆಯಲ್ಲಿರುವ ನೌಕರರು ತಮ್ಮ ತಮ್ಮ ಮುಂಗಟ್ಟೆಗೆ ನಿಗದಿಯಾದ ಕೆಲಸವನ್ನಷ್ಟೇ, ಮಾಡಬೇಕೆನ್ನುವ ಧೋರಣೆಯನ್ನು ತಾಳಿರುವುದರಿಂದ, ತನ್ನ ಖಾತೆಗೆ ಜಮಾ ಆಗ ಬೇಕಾದ ಹಣದ ಬಗ್ಗೆ ವಿಚಾರಿಸುತ್ತಿರುವ ಗ್ರಾಹಕನಿಗೆ ನಿರ್ಭಾವ ದಿಂದ "ಅದೇನೋ ನಂಗೊತ್ತಿಲ್ಲ—ಅಲ್ಲಿದ್ದಾರಲ್ಲ ಅವರನ್ನ ಕೇಳಿ" ಎಂದು ತೀರುವೆ ಮುಂಗಟ್ಟೆಯಲ್ಲಿರುವವರನ್ನೋ ಮತ್ತಾರನ್ನೋ ತೋರಿಸುತ್ತಾರೆ. ಆ ಗ್ರಾಹಕ ಇವರು ತೋರಿಸಿದ ವ್ಯಕ್ತಿಯನ್ನು ಕೇಳಿದಾಗ ಅವನಿಗೆ ಸರಿಯಾದ ಉತ್ತರ ಬಂದರೆ ಬರಬಹುದು, ಇಲ್ಲದಿದ್ದರೆ ಇಲ್ಲ—ಆ ಮುಂಗಟ್ಟೆಯವರೂ, ಇನ್ನಾವುದಾದರೂ ಮುಂಗಟ್ಟೆಗೋ ಅಥವಾ ವ್ಯವಸ್ಥಾಪಕರ ಬಳಿಗೋ ಕಳುಹಿಸ ಬಹುದು. ಇಷ್ಟಾಗುವಷ್ಟರಲ್ಲಿ ಆ ಗ್ರಾಹಕನಿಗೆ 30–40 ನಿಮಿಷ ಗಳ ಸಮಯ ವ್ಯಯವಾಗಿರುತ್ತದೆ. ಇಂತಹ ಸಮಯದಲ್ಲಿ ದೂರು ಗಳು ಸೃಷ್ಟಿಯಾಗುವುದು ಸಹಜ.

ನಗದು ಮುಂಗಟ್ಟೆಗಳಲ್ಲಿಯೂ ಹಣದ ಪಾವತಿ ಮಾಡಿ ಅದರ ರಸೀತಿಗಾಗಿ ಬಹಳಷ್ಟು ಸಮಯ ಕಾಯುವ ಪರಿಸ್ಥಿತಿಯೂ ಇರುತ್ತದೆ. ಇಂತಹ ತೊಂದರೆಗಳು ನಮ್ಮ ಬ್ಯಾಂಕುಗಳ ಸರ್ಾಫ್ ಮುಂಗಟ್ಟೆಗಳಲ್ಲಿ (ಟೆಲ್ಲರ್ ಕೌಂಟರ್) ನಿವಾರಣೆಯಾಗಿದೆ. ಆದಾಗ್ಯೂ ಮೇಲೆ ಹೇಳಿದಂತಹ ತಿಂಗಳ ಮೊದಲ ವಾರದ ದಿನ ಗಳಲ್ಲಿ ನಿವೃತ್ತಿವೇತನದಾರರೇ ಮುಂತಾದ ವಿವಿಧ ವರ್ಗಗಳ ವೇತನದಾರರು ಒಮ್ಮೆಗೇ ಬ್ಯಾಂಕಿನ ಸೇವೆಯನ್ನು ಅಪೇಕ್ಷಿಸುವುದ ರಿಂದ, ನಮ್ಮ ಆದ್ಯತಾಪಟ್ಟಿಯ ಗ್ರಾಹಕರನ್ನು ನಾವು ಕಳೆದು ಕೊಳ್ಳುವುದಷ್ಟೇ ಅಲ್ಲದೆ, ಅವರಿಂದ ಬರುವ ದೂರುಗಳಿಗೂ ಎಡೆ ಮಾಡಿಕೊಡುತ್ತೇವೆ.

### ಅಪೇಕ್ಷಿತ ಸೇವೆಗಳು

ಸಾಮಾನ್ಯವಾಗಿ ಗ್ರಾಹಕರು ಅಪೇಕ್ಷಿಸುವ ಸೇವೆಗಳು ಪ್ರಮುಖ ವಾಗಿ ನಾಲ್ಕು ವಿಧವಾದವು :

1 ಶಾಖೆಯ ಮುಂಗಟ್ಟೆಗಳಲ್ಲಿ ದೊರೆಯುವ ಸಾಮಾನ್ಯಸೇವೆ,
2 ಡ್ರಾಫ್ಟು ಇತ್ಯಾದಿಗಳನ್ನು ಪಡೆಯುವುದು/ಠೇವಣಿ ಇಡುವುದು,
3 ತೀರುವೆ ಚೆಕ್ಕುಗಳ ಪಾವತಿ/ಹೊರ ಊರುಗಳ ಚೆಕ್ಕುಗಳ ಪಾವತಿ,
4 ಸಾಲಗಳನ್ನು ಪಡೆಯುವುದು.

ಮೇಲಿನ ಸೇವೆಗಳಲ್ಲಿ ಸುಧಾರಣೆಯನ್ನು ತರುವಲ್ಲಿ ಪ್ರತಿ ಯೊಂದು ಬ್ಯಾಂಕಿನ ಆಡಳಿತವರ್ಗ ಹಾಗೂ ಸರಕಾರವಷ್ಟೇ ಅಲ್ಲದೆ ಅರ್ಥಶಾಸ್ತ್ರಜ್ಞರು, ಮಾನವ ಸಂಪನ್ಮೂಲದ ಬಳಕೆಗೆ ಸಲಹಾ ಗಾರರು—ಹೀಗೆ ಹಲವು ನಿಟ್ಟಿನ ಕಾಳಜಿಯ ಫಲಸ್ವರೂಪವಾಗಿ 1990ರ ಬಜೆಟ್ ಅಧಿವೇಶನದಲ್ಲಿ ಅಂದಿನ ವಿತ್ತಮಂತ್ರಿಗಳಾಗಿದ್ದ ಪ್ರೊ. ಮಧು ದಂಡವತೆಯವರು ಬ್ಯಾಂಕುಗಳಲ್ಲಿ ಗ್ರಾಹಕರ ಸೇವೆ ಯನ್ನು ಪ್ರಸ್ತಾಪಿಸುತ್ತಾ, ಹಲವಾರು ಸಾಂಸ್ಥಿಕ ಸಂರಚನೆಯ ಬದಲಾವಣೆಗಳನ್ನೂ ನಿಯಮ–ನಿಬಂಧನೆಗಳಲ್ಲಿ ನಮ್ಯತೆ ಯನ್ನೂ ತರಬೇಕೆಂದು ಸೂಚಿಸಿದ್ದರು. ಅದೇ ನಿಟ್ಟಿನಲ್ಲಿ, ಸರಕಾರ ದಿಂದ ಬಂದ ಆದೇಶದಂತೆ ಭಾರತೀಯ ರಿಸರ್ವ್ ಬ್ಯಾಂಕು, ಭಾರತೀಯ ಸ್ಟೇಟ್ ಬ್ಯಾಂಕಿನ ಅಂದಿನ ಅಧ್ಯಕ್ಷರಾದ ಗೋಯ್‌ಪೋರಿಯರವರ ನೇತೃತ್ವದಲ್ಲಿ ಒಂದು ಸಮಿತಿಯನ್ನು ರಚಿಸಿತು. ಇದರ ವರದಿ ಡಿ. 1991ರ ಸುಮಾರಿಗೆ ಬಂದು, ಬ್ಯಾಂಕುಗಳಲ್ಲಿ ಇದರ ಶಿಫಾರಸುಗಳನ್ನು ನಾಲ್ಕು ಹಂತಗಳಲ್ಲಿ ಜಾರಿಗೊಳಿಸುವ ಆದೇಶಗಳು ಹೊರಟವೆ. ಈ ಸಮಿತಿಯಲ್ಲಿನ ಕೆಲವು ಅಂಶಗಳಲ್ಲಿ ತಾಂತ್ರಿಕವಾಗಿ ಮತಭೇದವಿದ್ದರೂ, ನಮ್ಮ ಬ್ಯಾಂಕುಗಳ ಕಾರ್ಮಿಕ ಸಂಘಗಳು ಗೋಯ್‌ಪೋರಿಯ ಸಮಿತಿಯ ಶಿಫಾರಸುಗಳತ್ತ ಗಂಭೀರವಾದ ಗಮನಹರಿಸಿ, ತಮ್ಮ ಸದಸ್ಯರ ಮಾಹಿತಿಗಾಗಿ ಸುತ್ತೋಲೆಗಳನ್ನೂ ಕಳುಹಿಸಿವೆ. ಜುಲೈ 92ರಿಂದ ಜಾರಿಗೆ ಬಂದ ಪ್ರಮುಖವಾದ ಕೆಲವು ಶಿಫಾರಸುಗಳನ್ನು ಇಲ್ಲಿ ಹೇಳಬಹುದು :

1 ಶಾಖೆ ಸಾರ್ವಜನಿಕರಿಗೆ ತೆರೆಯುವ ಸಮಯಕ್ಕಿಂತ 15 ನಿಮಿಷ ಗಳಿಗೆ ಮೊದಲು ಸಿಬ್ಬಂದಿ ಹಾಜರಿಯಾಗಿರಬೇಕೆಂಬ ನಿಯಮ,
2 ಮಧ್ಯಮ ಮಟ್ಟದ ಹಾಗೂ ದೊಡ್ಡ ಶಾಖೆಗಳಲ್ಲಿ 'ವಿಚಾರಣೆ ಮುಂಗಟ್ಟೆ'ಗಳನ್ನು ಕಡ್ಡಾಯವಾಗಿ ತೆರೆಯುವುದು,
3 ಚಿಕ್ಕ ಮೌಲ್ಯದ ನೋಟುಗಳನ್ನು ಸ್ವೀಕರಿಸುವುದು,
4 ಹಳೆಯ ಹಾಗೂ ಹರಿದ ನೋಟುಗಳ ಸ್ವೀಕಾರ/ಬದಲಾವಣೆ,
5 ನೋಟುಗಳನ್ನು ಹೊಲಿಯುವುದರಲ್ಲಿ ಸುಧಾರಣೆ,
6 ನಾಮಾಂಕನ ಸವಲತ್ತು.

ಈ ಸುಧಾರಣೆಗಳನ್ನು ಜಾರಿಗೆ ತರುವಲ್ಲಿ ಪ್ರಮುಖ ಪಾತ್ರ ವಹಿಸುವ ನೌಕರರ ಧೋರಣೆಗಳಲ್ಲಿ ಬದಲಾವಣೆಯನ್ನು ತರುವಲ್ಲಿ ಮಾನವ ಸಂಪನ್ಮೂಲ ಅಭಿವೃದ್ಧಿ ವಿಭಾಗದ ಬಗ್ಗೆ ಆಡಳಿತ ವರ್ಗದಲ್ಲಿ ಹೆಚ್ಚುತ್ತಿರುವ ಕಾಳಜಿ ಹಾಗೂ 'ಗುಣಮಟ್ಟ ವೃತ್ತ'ಗಳ ರಚನೆ ಮುಂತಾದವು ಪ್ರಮುಖವಾಗಿ ಕಾಣುತ್ತವೆ.

## ತರಬೇತಿಯ ಇತಿಮಿತಿ

ಆದಾಗ್ಯೂ, ತಾನು ಮಾಡುವ ಕೆಲಸದಲ್ಲಿ ತಾದಾತ್ಮ್ಯವನ್ನು ಕಾಣಲು ಬೇಕಾದ ಅನುಸ್ಥಾಪನ (ಓರಿಯೆಂಟೇಷನ್) ನಮ್ಮ ತರಬೇತಿ ಕೇಂದ್ರಗಳಲ್ಲಿ ಸಿಗುವುದು ಕಷ್ಟಸಾಧ್ಯವಾದುದು. ಸಾಮ್ರಾಜ್ಯಶಾಹಿ ಬ್ರಿಟಿಷ್ ದೊರೆಗಳು ತಮ್ಮ ಆಡಳಿತಾನುಕೂಲಕ್ಕಾಗಿ ರೂಢಿಗೆ ತಂದ ವಿಧಿ—ವಿಧಾನಗಳೇ ಇಂದೂ ನಮ್ಮಲ್ಲಿ ಜಾರಿಯಲ್ಲಿರುವುದು ಬ್ಯಾಂಕ್ ಸಿಬ್ಬಂದಿಯ ಹಾಗೂ ಅಧಿಕಾರಿಗಳ ಅಭಿಮುಖೀಕರಣಕ್ಕೆ ಒಂದು ದೊಡ್ಡ ಅಡ್ಡಿಯಾಗಿದೆ. ಅಂದರೆ, ಒಬ್ಬರನ್ನೊಬ್ಬರು ನಂಬದಿರುವಂತಹ, ತರತಮ ಸ್ಥಾನಗಳಿಂದ ನೌಕರರನ್ನು ವಿಭಾಗಿಸಿರುವ ಒಂದು ವ್ಯವಸ್ಥೆ. ಶಾಖೆಗಳ ಮುಂಗಟ್ಟೆಯಲ್ಲಿ ಬ್ಯಾಂಕನ್ನು ಪ್ರತಿನಿಧಿಸುತ್ತಿರುವ ನೌಕರರು ಗ್ರಾಹಕರ ಚೆಕ್ಕುಗಳ ಕ್ಷಿಪ್ರಪಾವತಿಗಾಗಿಯೋ ಮತ್ತಿನ್ನಾವುದಾದರೂ ಸೌಲಭ್ಯವನ್ನು ಕೊಡುವುದಕ್ಕಾಗಿಯೋ—ಒಂದು ಚಿಕ್ಕ ನಿರ್ಣಯವನ್ನೂ ತೆಗೆದುಕೊಳ್ಳಲಾಗದಂತಹ ಸ್ಥಿತಿಯಿರುವುದು ಅವರಲ್ಲಿ ಹತಾಶ ಭಾವವನ್ನು ಮೂಡಿಸುತ್ತದೆ. ಹಾಗೂ ಈ ಮಟ್ಟದ ನೌಕರರಿಂದ ಯಾವುದೇ ನಿಯಮದ ಉಲ್ಲಂಘನೆಯನ್ನೂ ನಮ್ಮ ವ್ಯವಸ್ಥೆ ಸಹಿಸುವುದಿಲ್ಲ. ವಿವೇಚನಾಧಿಕಾರವನ್ನುಳ್ಳ ತಮ್ಮ ಮೇಲಧಿಕಾರಿಗಳು ತಮ್ಮನ್ನು ನಂಬದಿರುವುದರಿಂದಾಗಿ ಉಂಟಾಗುವ ಕೀಳರಿಮೆ ಹಾಗೂ ಅದರಿಂದ ನೌಕರರನ್ನು ಕಾಡುವ ಅತಂತ್ರ ಭಾವನೆಗಳು ಕೆಲಸದಲ್ಲಿ ತಾದಾತ್ಮ್ಯ ಸಾಧಿಸುವಲ್ಲಿ ವೈಫಲ್ಯ ತರುತ್ತವೆ. ಮೇಲುಸ್ತುವಾರಿ ಇಲ್ಲದೆ ಕೆಲಸ ಮಾಡಬಲ್ಲಂತಹ ವಾತಾವರಣದ ನಿರ್ಮಾಣವಾಗಬೇಕು. ಕೆಲವಾರು ನಿರ್ಣಯಾಧಿಕಾರಗಳನ್ನು ಮುಂಗಟ್ಟೆಯಲ್ಲಿರುವ ನೌಕರರಿಗೆ ಕೊಡುವುದರಿಂದಾಗಿ ಈ ಪರಿಸ್ಥಿತಿ ಸುಧಾರಿಸಬಲ್ಲದು. ಈ ದಿಸೆಯಲ್ಲಿ ಕಾರ್ಮಿಕ ಸಂಘಗಳ ಸಹಕಾರವೂ ಅತ್ಯಗತ್ಯವಾಗುತ್ತದೆ.

## ಗ್ರಾಹಕರ ಪ್ರಮುಖ ದೂರು

ಗ್ರಾಹಕರ ಪ್ರಮುಖ ದೂರುಗಳಲ್ಲೊಂದಾದ ತೀರುವೆ ಚೆಕ್ಕುಗಳ ಹಾಗೂ ಡ್ರಾಫ್ಟುಗಳ ಜಮೆಯ ವಿಷಯದಲ್ಲಿ ಬಹಳಷ್ಟು ಸುಧಾರಣೆ ಆಗಬೇಕಿದೆ. ಹೊರ ಊರಿನ ಚೆಕ್ಕುಗಳ ಜಮೆಯಲ್ಲಿ ಈಗ ಬಂದಿರುವ ಸುಧಾರಣೆಯನ್ನು, ಅಂದರೆ ಗ್ರಾಹಕರು ಲಿಖಿತ ರೂಪದಲ್ಲಿ ತಮ್ಮ ಹೊಣೆಗಾರಿಕೆಯನ್ನು ತಿಳಿಸಿದರೆ ಹೊರ ಊರಿನ ಚೆಕ್ಕು/ಡ್ರಾಫ್ಟುಗಳ ಜಮೆಯು ಕ್ಷಿಪ್ರವಾಗಿ ಆಗುವ ವ್ಯವಸ್ಥೆಯನ್ನು, ತೀರುವೆ ವ್ಯವಸ್ಥೆಗೂ ಅನ್ವಯಿಸಬೇಕು. ಇದರೊಂದಿಗೆ ಗೋಯ ಪೋರಿಯ ಶಿಫಾರಸ್ಸುಗಳಲ್ಲಿ ಇಲ್ಲದಿರುವ ಒಂದೆರಡು ಸುಲಭ ಸಾಧ್ಯ ಸುಧಾರಣೆಗಳನ್ನು ಹೇಳಬಯಸುತ್ತೇನೆ. ಮೊದಲನೆಯದಾಗಿ, ಉಳಿತಾಯ/ಆವರ್ತಕ ಠೇವಣಿ ಖಾತೆಗಳು ಪಾಸ್ ಪುಸ್ತಕಗಳಲ್ಲಿನ ನಮೂದಿನ ಅಸ್ಪಷ್ಟತೆಯ ಬಗ್ಗೆ ಇರುವ ದೂರಿಗೆ, ಈ ಪಾಸ್‌ಪುಸ್ತಕಗಳ ಕೆಳಮಟ್ಟದ ಮುದ್ರಣವೂ ಕಾರಣವಾಗಿದೆ. ಅತಿ ತೆಳುವಾದ ಕಾಗದದ ಬಳಕೆ, ಅಲ್ಲಿನ ಗೆರೆಗಳು ಒಂದರ ಮೇಲೊಂದು ಇದ್ದು ಕ್ಷಿಪ್ರವಾಗಿ ನಮೂದು ಮಾಡುವಾಗ ಅಸ್ಪಷ್ಟತೆ ಮೂಡುತ್ತದೆ. ಹಾಗೂ ಪಾಸ್ ಪುಸ್ತಕದ ಅಳತೆಯೂ ಸ್ವಲ್ಪ ದೊಡ್ಡದಾಗಬಹುದು. ಎರಡನೆಯದಾಗಿ, ಈಗಿರುವ ಚೆಕ್ ಪುಸ್ತಕಗಳ ಹಾಳೆಗಳ ಗರಿಷ್ಠ ಸಂಖ್ಯೆಯನ್ನು ಏರಿಸಬಹುದು. ಇದರಿಂದಾಗಿ, ತಿಂಗಳ ಮೊದಲ ವಾರದ ಇತರ ಒತ್ತಡಗಳ ಮಧ್ಯೆ, ಚೆಕ್ಕು ಪುಸ್ತಕಗಳನ್ನು ಪದೇ ಪದೇ ಪಡೆಯಲು ಬರುವ ಗ್ರಾಹಕರ ಸಂಖ್ಯೆ ತಗ್ಗಬಹುದು.

## ಸಾಲದ ನೀಡಿಕೆ

ಗ್ರಾಹಕರ ದೂರಿನ ಮತ್ತೊಂದು ಪ್ರಮುಖ ಅಂಶವಾದ 'ಸಾಲದ ನೀಡಿಕೆ'ಯಲ್ಲೂ ನಮ್ಮ ಬ್ಯಾಂಕುಗಳ ಆಡಳಿತದಲ್ಲಿನ ವಿಪರೀತ ಕಟ್ಟುಪಾಡುಗಳು ಮುಖ್ಯ ಪಾತ್ರ ವಹಿಸುತ್ತವೆ. ಇಲ್ಲಿ ಬ್ಯಾಂಕಿನ ಕ್ಷೇತ್ರಾಧಿಕಾರಿಗಳು ಹಾಗೂ ಶಾಖಾವ್ಯವಸ್ಥಾಪಕರದ್ದೇ ಹೆಚ್ಚಿನ ಹೊಣೆ. ಈ ಅಧಿಕಾರಿಗಳಿಗೆ ವಿವೇಚನಾಧಿಕಾರ ಇದ್ದಾಗ್ಯೂ, ಪ್ರತಿಯೊಂದು ನಿರ್ಣಯವನ್ನೂ ಆಡಳಿತದ ಬಿಗಿ-ಕಟ್ಟುಪಾಡುಗಳಿಗನುಗುಣವಾಗಿಯೇ ತೆಗೆದುಕೊಳ್ಳಬೇಕಾದುದರಿಂದ ಹಾಗೂ ಬಹಳಷ್ಟು ಬಾರಿ ಕ್ಷೇತ್ರೀಯ ಕಚೇರಿಯಿಂದ ಮಂಜೂರಾತಿ ಪಡೆಯಬೇಕಾದುದರಿಂದ ಸಾಲನೀಡಿಕೆಯ ವಿಧಿ-ವಿಧಾನಗಳು ಬಹು ದೀರ್ಘ ಕಾಲವನ್ನು ತೆಗೆದುಕೊಳ್ಳುವುದನ್ನು ನಾವು ಕಾಣುತ್ತೇವೆ. ಇಲ್ಲಿಯೂ ಬಹಳಷ್ಟು ಸುಧಾರಣೆಗಳಾಗಬೇಕಾಗಿದೆ. ಇಲ್ಲಿಯೂ ಗ್ರಾಹಕ ಸೌಜನ್ಯಪೂರ್ಣ, ಮುಗುಳುನಗೆಯಿಂದ ಕೂಡಿದ ಸೇವೆಯನ್ನು ಅಪೇಕ್ಷಿಸುತ್ತಾನಾದರೂ, ಅವನಿಗೆ ಎದುರಾಗುವುದು ಬಿಗಿ ಮುಖಗಳೇ.

ಈಗಿನ ಬದಲಾದ ಆರ್ಥಿಕ ನೀತಿಗನುಗುಣವಾಗಿ ಬ್ಯಾಂಕ್ ನೌಕರರು ಹೆಚ್ಚು ವೃತ್ತಿಪರ ಧೋರಣೆಗಳನ್ನು ಬೆಳೆಸಿಕೊಳ್ಳುವುದು ಅನಿವಾರ್ಯವಾಗುತ್ತದೆ. ಇಲ್ಲಿ ಉತ್ತಮ ಪರಿಸ್ಥಿತಿಯನ್ನು ನಿರ್ಮಾಣ ಮಾಡುವಲ್ಲಿ ಬ್ಯಾಂಕುಗಳೂ ಹಲವಾರು ಬಗೆಯ ಸಂರಚನಾತ್ಮಕ ಬದಲಾವಣೆಗಳನ್ನು ಮಾಡಿಕೊಳ್ಳುವುದು ಹಾಗೂ ಆಡಳಿತದಲ್ಲಿ ನಮ್ಯತೆಯನ್ನು ಹೆಚ್ಚಿಸಿಕೊಳ್ಳುವುದು ಇಂದಿನ ಅಗತ್ಯವಾಗಿದೆ. ಪ್ರಮುಖವಾದ ಅಂಶವೆಂದರೆ, ಬ್ಯಾಂಕಿನ ಎಲ್ಲಾ ವರ್ಗದ ನೌಕರರಿಗೂ ನಿರ್ಣಯ ಸ್ವಾತಂತ್ರ್ಯವನ್ನು ಕ್ರಮಕ್ರಮವಾಗಿ ಕೊಡುವುದು. ಇದರಿಂದಾಗಿ ನೌಕರರು ತಾವು ಮಾಡುವ ಕೆಲಸದ ಹೊಣೆಗಾರಿಕೆಯನ್ನು ಹೊರುವಂತಾಗಿ, ಪ್ರತಿಯೊಂದು ಚಿಕ್ಕ ನಿರ್ಣಯಕ್ಕೂ ಮೇಲಧಿಕಾರಿಗಳಿಗೆ ಕಾಯಬೇಕಿಲ್ಲದ ಸ್ಥಿತಿ ನಿರ್ಮಾಣವಾದಾಗ, ನೌಕರರಿಗೆ ತಾವು ಸಂಸ್ಥೆಯ ಅವಿಭಾಜ್ಯ ಅಂಗ ಎನ್ನುವ ಭಾವನೆ ಮೂಡಲು ಸಹಕಾರಿಯಾಗುತ್ತದೆ. ಇಲ್ಲಿ ಗೋಯ್ ಪೋರಿಯ ಸಮಿತಿಯ ಶಿಫಾರಸ್ಸಿನಲ್ಲಿರುವ ಏಕತ್ರೀಕೃತ ಮುಂಗಟ್ಟೆ, ಅಂದರೆ ಹಲವಾರು ಸೇವೆಗಳನ್ನು ಒಂದೇ ಮುಂಗಟ್ಟೆಯಲ್ಲಿ ಪಡೆಯುವ ಸೌಲಭ್ಯವನ್ನು ನಮ್ಮ ಬ್ಯಾಂಕುಗಳಲ್ಲಿ ಕಾರ್ಯರೂಪಕ್ಕೆ

ತರುವುದು ಬಹಳಷ್ಟು ಸಹಾಯಕವಾಗುತ್ತದೆ. ಈ ಮಟ್ಟದಲ್ಲಿ ಯಲ್ಲಿರುವ ವಿಶೇಷ ಸರಾಫರಿಗೆ ಹೆಚ್ಚಿನ ನಿರ್ಣಯಾಧಿಕಾರವಿದ್ದು, ಗ್ರಾಹಕರು ಅಪೇಕ್ಷಿಸುವ ಹಲವಾರು ಸೇವೆಗಳನ್ನು ತಾವು ಒದಗಿಸಿ ಗ್ರಾಹಕರ ಸಂತೃಪ್ತಿಗೆ ಕಾರಣವಾಗಿದ್ದೇವೆಂಬ ಭಾವನೆ ಹೆಚ್ಚಿ 'ಮುಗುಳು ನಗೆ' ಅರಳಿ ಗ್ರಾಹಕ ಸೇವೆಯ ಕೌಶಲ ಕರಗತವಾಗು ತ್ತವೆ. ವೃತ್ತಿಪರತೆ ಹಾಗೂ ಲಾಭಪ್ರದತೆಗಳು ಸೇರಿ ತನ್ನಿಂದ ತಾನೇ ಏಳಿಗೆ ಆಗುವುದರಲ್ಲಿ ಸಂಶಯವಿಲ್ಲ.

### ವಿವೇಚನಾಧಿಕಾರ

ಈಗ ಇರುವ ವ್ಯವಸ್ಥೆಯಡಿಯಲ್ಲಿ, ನಿರ್ಣಯಾಧಿಕಾರವುಳ್ಳ ಅಧಿಕಾರಿಗಳು ತಮ್ಮ ವಿವೇಚನಾಧಿಕಾರವನ್ನು ಬಳಸದೇ ಇರುವು ದನ್ನು ಕಾಣುತ್ತೇವೆ. ಇಲ್ಲಿಯೂ ತಮಗಿಂತ ಮೇಲಿನ ಅಧಿಕಾರಿಗಳು ತಮ್ಮ ಮೇಲಿಟ್ಟಿರುವ ನಂಬಿಕೆಯ ಮಟ್ಟವೇ ಪ್ರಮುಖ ಅಂಶ ವಾಗುತ್ತದೆ. ಆಡಳಿತ ವ್ಯವಸ್ಥೆ ವಿಧಿಸಿರುವ ಹಲವಾರು ನಿಯಮ-ನಿಬಂಧನೆಗಳಡಿ, ವಿವೇಚನಾಧಿಕಾರ ಇಂದು ತನ್ನ ಶಕ್ತಿಯನ್ನು ಕಳೆದುಕೊಂಡಿರುವುದು ಕಾಣಸಿಗುತ್ತದೆ. ತಮ್ಮ ಕಾರ್ಯಾವಧಿಯಲ್ಲಿ ತಾವು ಗಣನೆಗೆ ತಂದುಕೊಳ್ಳದ ಯಾವುದೋ ಒಂದು ಚಿಕ್ಕ ನಿಯ ಮದ ಉಲ್ಲಂಘನೆಯನ್ನು ದೊಡ್ಡದಾಗಿ ಪರಿಗಣಿಸುವ ಪರಿಸ್ಥಿತಿ ಬದಲಾದಾಗ ಮುಗುಳುನಗೆ ಮತ್ತೆ ಮೂಡಿಬಂದು, ತಾವು ಮಾಡುವ ಕೆಲಸದಲ್ಲಿ ತಾದಾತ್ಮ್ಯವನ್ನು, ಆತ್ಮವಿಶ್ವಾಸವನ್ನು, ಹೊಂದುವಂತಾಗಿ ವೈಯಕ್ತಿಕ ಸಫಲತೆಯ ಭಾವ ಹೆಚ್ಚಾದಂತೆಲ್ಲಾ ಸಾಂಸ್ಥಿಕ ಬೆಳವಣಿಗೆ ತನ್ನಿಂದತಾನೇ ಆಗುವುದನ್ನು ಕಾಣಬಹುದು.

ಠೇವಣಿ ಪ್ರಧಾನ ಶಾಖೆಗಳು, ಸಾಲ ಪ್ರಧಾನ ಶಾಖೆಗಳು, ಸೇವಾ ಶಾಖೆಗಳಿದ್ದಾಗ್ಯೂ ಬಡ್ತಿಯ ಸಂದರ್ಭದಲ್ಲಿ ಒಂದೇ ರೀತಿಯ ಮಾನದಂಡವನ್ನು ಇಟ್ಟಿರುವುದು ಹಾಗೂ ತಮ್ಮ ಮೇಲಧಿಕಾರಿಗಳ ಅವಗಾಹನೆಗೆ ತಂತ್ತಾಗುವ 'ಪರಿವೀಕ್ಷಕರ ವರದಿ' ಯಲ್ಲೂ ಒಂದೇ ರೀತಿಯ ಮಾನದಂಡವಿರುವುದು ಇಂದಿನ ವಿಪರ್ಯಾಸಗಳಲ್ಲೊಂದಾಗಿದೆ. ಪ್ರತಿಯೊಬ್ಬ ನೌಕರ ಹಾಗೂ ಅಧಿಕಾರಿಯ ಕಾರ್ಯಕ್ಷಮತೆಯನ್ನು ಅಳೆಯಲು ವೈಜ್ಞಾನಿಕ ವ್ಯವಸ್ಥೆ ರೂಪುಗೊಳ್ಳಬೇಕಾದುದು ಅತ್ಯಗತ್ಯ. ಗ್ರಾಹಕಸೇವಾಕೇಂದ್ರ ಗಳಾದ ಶಾಖೆಗಳಲ್ಲಿ ವ್ಯವಸ್ಥಾಪಕರ ಆತ್ಮಸ್ಥೈರ್ಯವನ್ನು ಕುಗ್ಗಿ ಸುವ ಅಂಶಗಳ ಸಂಖ್ಯೆ ಹೆಚ್ಚಾಗಿ ಇಲ್ಲಿಯೂ ಮುಗುಳುನಗೆ ಮಾಯವಾಗಿದೆ. ಗ್ರಾಹಕರು ತಮ್ಮ ದೂರುಗಳನ್ನು ವರಿಷ್ಠ ಮಟ್ಟಕ್ಕೆ ಒಯ್ಯುವುದಕ್ಕೆ ಮೊದಲು ಕಾಣುವ ಶಾಖಾ ವ್ಯವಸ್ಥಾಪಕರು ಸೌಜನ್ಯದಿಂದ ನಡೆದುಕೊಳ್ಳುವಂತೆ ನಿಯಮಾವಳಿ ಗಳಲ್ಲಿ ನಮ್ಯತೆ ತಂದರೆ ಹಾಗೂ ಮೇಲಧಿಕಾರಿಗಳಲ್ಲಿನ ನಂಬಿಕೆಯ ಮಟ್ಟ ಹೆಚ್ಚಿಸಿ ನಿವಾರಿಸಬಹುದು.

ಇಷ್ಟೆಲ್ಲಾ ಬೇರೆ ಬೇರೆ ಸ್ತರಗಳಲ್ಲಿನ ಅಸಂತೃಪ್ತಿಯನ್ನು ಗುರುತಿಸಬಹುದಾದರೂ, ಗ್ರಾಹಕರ ಅಪೇಕ್ಷೆ ಈಡೇರಿ ಒಂದು ಮಾದರಿ ವಾತಾವರಣದ ನಿರ್ಮಾಣ ಒಂದು ಶಾಖೆಯಲ್ಲಿ ಕೆಲಸ ಮಾಡುವವರಲ್ಲಿ 'ತಂಡಮನೋಧರ್ಮ' ಮೂಡಿದಾಗ ಮಾತ್ರ ಸಾಧ್ಯವಾಗುತ್ತದೆ. ಉದಾಹರಣೆಗೆ ಸರಾಫ ಮಟ್ಟದಲ್ಲಿ ಒಳ್ಳೆ ಸೇವೆ ದೊರೆತರೂ, ಒಬ್ಬ ಗ್ರಾಹಕನಿಗೆ, ತೀರುವೆ ಚೆಕ್ಕಿನ ವಿಷಯ ದಲ್ಲೋ ಸಾಲದ ವಿಷಯದಲ್ಲೋ ಬೇರೆ ಬೇರೆ ನೌಕರರ ಅಥವಾ ಅಧಿಕಾರಿಗಳ ಬಿಗಿ ಮುಖಗಳು ಎದುರಾದಾಗ ಮತ್ತೆ ಸಮಸ್ಯೆಯ ಸೃಷ್ಟಿಯಾಗುತ್ತದೆ.

ಇತ್ತೀಚಿನ ದಿನಗಳಲ್ಲಿ ಹೆಚ್ಚುತ್ತಿರುವ ಗಣಕೀಕರಣದಿಂದಾಗಿ ಕೆಲಸದ ಒತ್ತಡ ಕಡಿಮೆಯಾಗಿ ಗ್ರಾಹಕ ಸೇವೆಯತ್ತ ಹೆಚ್ಚಿನ ಒಲವು ಮೂಡುತ್ತಿರುವುದನ್ನು ಕಾಣುತ್ತಿದ್ದೇವೆ. ಈಗ ಹೆಚ್ಚಿನ ವಿವೇಚನಾಧಿಕಾರ ಹಾಗೂ ಆಡಳಿತದ ನಮ್ಯತೆಯಿಂದಾಗಿ ಪರಸ್ಪರ ನಂಬಿಕೆ ಹೆಚ್ಚಾಗಿ ಒಟ್ಟಾರೆ ನಮ್ಮ ಬ್ಯಾಂಕಿಂಗ್ ವ್ಯವಸ್ಥೆ ವೃತ್ತಿ ಪರವಾಗುವುದಕ್ಕೆ ಸಹಾಯವಾಗುತ್ತದೆ.

ವಿದೇಶಿ ಬ್ಯಾಂಕುಗಳು ಹಾಗೂ ಹಲವಾರು ಖಾಸಗಿ ಬ್ಯಾಂಕು ಗಳಲ್ಲಿ ಸಾಧಿತವಾಗಿರುವ 'ವೃತ್ತಿಪರತೆ' ಇಂದು ನಮ್ಮ ಮುಂದಿರುವ ಬಹು ದೊಡ್ಡ ಸವಾಲಾಗಿದೆ. ಮಾನವ ಸಂಪನ್ಮೂಲದ ಸರಿಯಾದ ಬಳಕೆಯಾಗಿ, ಎಲ್ಲ ಬಗೆಯ ನೌಕರರಲ್ಲೂ ಆತ್ಮವಿಶ್ವಾಸ ಮೂಡಿ ವ್ಯಕ್ತಿಯ ಸ್ವ-ವಿಕಾಸದೊಂದಿಗೆ ಸಂಸ್ಥೆಯ ಏಳಿಗೆಗೂ ಕಾರಣವಾಗಬಲ್ಲ ಮುಗುಳುನಗೆಯೊಡನೆ ಸೇವೆ ಸಾರ್ವತ್ರಿಕವಾಗ ಲೆಂದು ಆಶಿಸುತ್ತೇನೆ. ●

---

# ಭಾರತ ಮತ್ತು ಯೂರೊ ಹಣ

[4ನೇ ಪುಟದಿಂದ ಮುಂದುವರಿದುದು]

### ಪರಿಹಾರವೇನು ?

ಇನ್ನು ಮುಂದೆ ಅಲ್ಲಲ್ಲಿ ಒಂದೆರಡು ಕಲಾಪಗಳು ವರದಿಯಾ ದರೂ ಯಥಾಸ್ಥಿತಿಗೆ ಬರಬೇಕಾದರೆ ಸುರಿತ ಸಂಘಟನೆ ಹಾಗೂ ದಕ್ಷ ನಿಯಂತ್ರಣೆ ಅವಶ್ಯ. ವಿದೇಶೀಯರು 'ತಾಳು. ವೀಕ್ಷಿಸು' ಎಂದು ಸುಮ್ಮನಿದ್ದಾರೆ. ಅವರು ಭಾರತದಲ್ಲಿ ಆರ್ಥಿಕ ಸುಧಾರಣೆ, ಸಂಸ್ಥೆ ಗಳ ಪ್ರಾಮಾಣಿಕತೆ ಮತ್ತು ನ್ಯಾಯರೀತಿಯ ಬೆಲೆ ನಿರ್ಧಾರವನ್ನು ಎದುರು ನೋಡುತ್ತಾರೆ. ಚುನಾವಣಾ ಫಲಿತಾಂಶ, ಮಂತ್ರಿ ಮಂಡಲದ ಪುನರ್ರಚನೆ ಅವರ ಪ್ರಕಾರ ಗೌಣ ವಿಷಯ. ವಿದೇಶೀ ವಿನಿಮಯದಲ್ಲಿ ಉತ್ತಮ ಸ್ಥಿತಿ (20 ಬಿ ಡಾಲರ್‌ಗಳು), ಖಾಸಗಿ ಕ್ಷೇತ್ರದಲ್ಲಿ ಹೆಚ್ಚು ಲಾಭದಾಯಿತ್ವ, ದೂರಸಂಪರ್ಕ ಉದ್ಯಮದ ಖಾಸಗೀಕರಣದ ಸಾಧ್ಯತೆ ಅವರಿಗೆ ಆಸಕ್ತಿ ಉಂಟುಮಾಡುವ ಅಂಶ ಗಳಾಗಿವೆ. ಇದರಿಂದ ಚೇತರಿಕೆಗೆ ಅವಕಾಶವಾಗುವುದು. ಭಾರತ ಎಡಿಆರ್‌ಗೆ ಹಾಲುವುದು ಉತ್ತಮ ಒದಲಿಯಾಗಿದೆ. ಇದರಿಂದ ಅಮೆರಿಕನ್ ಹೂಡಿಕೆದಾರರಿಗೆ ನಮ್ಮ ಪೇಟೆ ಹತ್ತಿರವಾಗುವುದು ಒಳ್ಳೆಯ ನಿಗಮ ನೀತಿಮೌಲ್ಯಗಳು, ಅಲ್ಲಿಯ ಮಾನಕಗಳಿಗೆ ನಮ್ಮ ಸಂಸ್ಥೆಗಳು ಬದ್ಧವಾಗುವುದು, ಮಧ್ಯಪ್ರಾಚ್ಯ ವಲಯದಲ್ಲಿ ಶಾಂತಿ, ಹಿಂದೂ ಮುಸ್ಲಿಮರ ಸೌಹಾರ್ದ ಮುಂತಾದ ಅಂಶಗಳು ಅಮೆರಿಕನ್ ಗ್ರಾಹಕರನ್ನು ಆಕರ್ಷಿಸಬಲ್ಲವು. ಆದರೆ ಇಲ್ಲಿ ಭಾರತ ಎದುರಿಸಬೇಕಾದ ಸಮಸ್ಯೆ—ಚೀನಾದ ತೀವ್ರಸ್ಪರ್ಧೆ. ●

# ಬ್ಯಾಂಕಿಂಗ್ ಕ್ಷೇತ್ರದ ಬಿಕ್ಕಟ್ಟು

ಬಿ. ಎಸ್. ಚಂದ್ರಶೇಖರ

**ಬ್ಯಾಂಕುಗಳಿಗೆ ಇದು ಬಿಕ್ಕಟ್ಟಿನ ಸಮಯ. ಆರ್ಥಿಕ ಉದಾರೀಕರಣದ ಕೆಲವು ಪರಿಣಾಮುಗಳನ್ನು ಬ್ಯಾಂಕುಗಳು ಜೀರ್ಣಿಸಿಕೊಳ್ಳಲಾಗಿಲ್ಲ. ಹಲವು ಸಂಕಟಗಳೂ ವಿವಿಧ ರೀತಿಯ ಆತಂಕಗಳೂ ಬ್ಯಾಂಕುಗಳನ್ನು ಧೃತಿಗೆಡಿಸಿವೆ.**

ಈಚೆಗೆ ಒಂದೊಂದು ಹಣಕಾಸು ವರ್ಷ ಅಂತ್ಯವಾಗುವಾಗಲೂ ಬ್ಯಾಂಕುಗಳಿಗೆ ಆತಂಕವುಂಟಾಗತೊಡಗಿದೆ. ಸರಕಾರದ ನೀತಿಗಳು ಮತ್ತು ಆರ್ಥಿಕ ಕ್ಷೇತ್ರದಲ್ಲಿನ ಬದಲಾವಣೆಗಳಿಂದ ಉದ್ಭವಿಸುವ ಹೊಸ ಸವಾಲುಗಳನ್ನು ಬ್ಯಾಂಕಿಂಗ್ ಕ್ಷೇತ್ರ ಯಶಸ್ವಿಯಾಗಿ ಎದುರಿಸಲು ಸನ್ನದ್ಧವಾಗಬೇಕಾಗಿದೆ.

## ಸ್ಪರ್ಧೆ

ಬ್ಯಾಂಕಿಂಗ್ ಕ್ಷೇತ್ರದಲ್ಲಿ ಈಗಾಗಲೇ ಇರುವ ತೀವ್ರ ಸ್ಪರ್ಧೆಯ ಜತೆಗೆ ವಿದೇಶೀ ಬ್ಯಾಂಕುಗಳಿಂದ ಮತ್ತು ಖಾಸಗಿ ಕ್ಷೇತ್ರದ ಹೊಸ ಬ್ಯಾಂಕುಗಳಿಂದ ಮತ್ತಷ್ಟು ಸ್ಪರ್ಧೆಯುಂಟಾಗಲಿದೆ. ಸರಕಾರಿ ಕ್ಷೇತ್ರದ ಅನೇಕ ಬ್ಯಾಂಕುಗಳು ಈ ಸ್ಪರ್ಧೆಯನ್ನು ಎದುರಿಸಲು ಈಗಂತೂ ಸಿದ್ಧವಾಗಿಲ್ಲ. ಅವುಗಳ ಲಾಭನಷ್ಟದ ಅಂಕಿಗಳೂ ತೃಪ್ತಿಕರವಾಗಿಲ್ಲ. 1992-93ರಲ್ಲಿ 20 ರಾಷ್ಟ್ರೀಕೃತ ಬ್ಯಾಂಕುಗಳ ಪೈಕಿ ಏಳು ಮಾತ್ರ ಲಾಭ ತೋರಿಸಲು ಸಾಧ್ಯವಾಗಿತ್ತು. ಉಳಿದ ಕೆಲವು ಬ್ಯಾಂಕುಗಳ ಲಾಭದ ಅಂಕಿಗಳನ್ನು ರಿಸರ್ವ್ ಬ್ಯಾಂಕ್ ಪ್ರಶ್ನಿಸಿದೆ. ಬ್ಯಾಂಕುಗಳ ಅಳಿವು ಉಳಿವಿನ ಪ್ರಶ್ನೆಯೂ ತಲೆಯೆತ್ತುತ್ತಿರುವುದರಿಂದ ಲಾಭವೊಂದೇ ಮಾನದಂಡವಲ್ಲ ಎಂಬ ವಾದಕ್ಕೂ ಹೆಚ್ಚು ಮಾನ್ಯತೆ ದೊರೆಯುವುದಿಲ್ಲ.

## ಷೇರು ಹಗರಣ

ಷೇರು ಹಗರಣದ ಪೆಟ್ಟಿನಿಂದ ಚೇತರಿಸಿಕೊಳ್ಳಲು ಬ್ಯಾಂಕುಗಳಿಗೆ ಒಂದು ವರ್ಷ ಸಾಕಾಯಿತು. ಇಷ್ಟು ಬೇಗ ಅದು ಸಾಧ್ಯವಾದದ್ದು ನಿಜಕ್ಕೂ ಸಂತೋಷದ ಸಂಗತಿಯೇ. ಸಾರ್ವಜನಿಕರ ವಿಶ್ವಾಸವನ್ನು ಬ್ಯಾಂಕುಗಳು ಕಳೆದುಕೊಂಡಿಲ್ಲ.

## ಪ್ರಚಾರ ಕಾರ್ಯ

ಈವರೆಗೆ ಬ್ಯಾಂಕುಗಳ ಕಾರ್ಯನಿರ್ವಹಣೆ ಕುರಿತ ಪ್ರಚಾರ ಕಾರ್ಯವನ್ನು ಸಾರ್ವಜನಿಕ ಕ್ಷೇತ್ರದ ಬ್ಯಾಂಕುಗಳ ಜಂಟಿ ಪ್ರಚಾರ ಸಮಿತಿ ನಡೆಸುತ್ತಿತ್ತು. ಇದೀಗ ಜಂಟಿ ಪ್ರಚಾರ ಸಮಿತಿಯನ್ನು ರದ್ದುಪಡಿಸಲಾಗಿದೆಯೆಂಬ ಪ್ರಕಟಣೆ ಹೊರಬಿದ್ದಿದೆ. ಕ್ರಮೇಣ ಪ್ರತಿಯೊಂದು ಬ್ಯಾಂಕೂ ತನ್ನ ಕಾರ್ಯನಿರ್ವಹಣೆ ಕುರಿತು ಪ್ರತ್ಯೇಕವಾಗಿ ಪ್ರಚಾರ ಮಾಡತೊಡಗಿ ತನ್ನ ವಿಶಿಷ್ಟತೆಗಳನ್ನು ಉಳಿಸಿಕೊಳ್ಳಲು ಸಾಧ್ಯವಾಗುತ್ತದೆ. ಇದರಿಂದ ಬ್ಯಾಂಕುಗಳ ವ್ಯವಹಾರವೂ ಹೆಚ್ಚುವ ನಿರೀಕ್ಷೆಯಿದೆ. ಖಾಸಗಿ ಕ್ಷೇತ್ರದ ಹೊಸ ಬ್ಯಾಂಕುಗಳಿಂದ ಮತ್ತು ವಿದೇಶೀ ಬ್ಯಾಂಕುಗಳಿಂದ ಒದಗುವ ಹೊಸ ಸ್ಪರ್ಧೆಯನ್ನು ಎದುರಿಸಲು ಕೂಡ ಇದು ನೆರವಾದೀತು.

## ಲಾಭದ ಮೇಲೆ ಕಣ್ಣು

ಲಾಭಪ್ರದತೆಯತ್ತ ಒಂದು ಕಣ್ಣಿಟ್ಟಿರಲೇಬೇಕಾದ ಸ್ಥಿತಿ ಈಗ ಬ್ಯಾಂಕುಗಳಿಗೆ ಅನಿವಾರ್ಯವಾಗಿದೆ. ನರಸಿಂಹಂ ಸಮಿತಿ ರೂಪಿಸಿದ ಆದಾಯ ಗುರುತಿಸುವಿಕೆಯ ಮಾನದಂಡಗಳು ಭದ್ರವಾಗಿ ನೆಲೆಗೊಂಡಂತಾಗಿದೆ. ಈ ವರೆಗೂ ಜಾರಿಯಲ್ಲಿದ್ದ ಸಾಲಗಳ ಸ್ವಾಸ್ಥ್ಯ ಸಂಕೇತ ವ್ಯವಸ್ಥೆಯನ್ನು ರದ್ದುಪಡಿಸಲಾಗಿರುವುದರಿಂದ ನರಸಿಂಹಂ ಸಮಿತಿ ಸೂಚಿಸಿದ 'ಆಸ್ತಿವರ್ಗೀಕರಣ' ವ್ಯವಸ್ಥೆಯತ್ತ ಬ್ಯಾಂಕುಗಳು ಪೂರ್ಣ ಗಮನ ನೀಡಲು ನೆರವಾಗಿದೆ. ಈಗೀಗ ಸಾಲಗಳ ಗುಣಮಟ್ಟದ ಬಗ್ಗೆ ಕಾಳಜಿ ಅಧಿಕವಾಗುತ್ತಿದೆ. ಆದ್ಯತಾ ವಲಯ ಸಾಲಗಳ ಪ್ರಮಾಣವನ್ನು ಇಳಿಸಲು ಸಮಿತಿ ಸಲಹೆ ನೀಡಿದ್ದರೂ ಸರಕಾರ ಅದನ್ನು ಜಾರಿಗೊಳಿಸಿಲ್ಲ. ಆದ್ಯತಾವಲಯ ಸಾಲಗಳು ಒಟ್ಟು ಸಾಲದ ಶೇ. 40ರಷ್ಟು ಇರಬೇಕಾಗಿದ್ದು, ಬ್ಯಾಂಕುಗಳು ಈ ಗುರಿಗಿಂತ ಕೊಂಚ ಹಿಂದೆ ಇದ್ದವು. ಆದ್ಯತಾವಲಯಕ್ಕೆ ವಿವಿಧ ರೀತಿಯ ಗೃಹಸಾಲಗಳನ್ನು ಸೇರಿಸಿರುವುದರಿಂದ ಹಾಗೂ ಸಣ್ಣ ವ್ಯಾಪಾರಿಗಳನ್ನು ಕುರಿತ ವ್ಯಾಖ್ಯೆಯನ್ನು ಕೊಂಚ ಸಡಿಲಿಸಿರುವುದರಿಂದ ಈಗಿರುವ ಸ್ಥಿತಿಯಲ್ಲೇ ಶೇ. 40ರ ಗುರಿ ತಲುಪಲು ಸಾಧ್ಯವಾಗುತ್ತದೆ. ಇದರಿಂದ ಸ್ಪಷ್ಟವಾಗುವ ಒಂದು ಅಂಶವೆಂದರೆ ಸರಕಾರ ಸದ್ಯಕ್ಕೆ ಆದ್ಯತಾವಲಯಗಳ ಸಾಲಗಳನ್ನು ಕುರಿತಂತೆ ಮಹತ್ವದ ನಿರ್ಧಾರವನ್ನು ಕೈಗೊಳ್ಳುವುದಿಲ್ಲ ಎಂಬುದು.

ಸಿಬ್ಬಂದಿಯ ಕೊರತೆ ಬ್ಯಾಂಕುಗಳಲ್ಲಿ ಎಂದಿನ ಸಮಸ್ಯೆ. ಇದರತ್ತ ಧ್ಯಾನ ಕೊಡಲು ಸರಕಾರ ಸಿದ್ಧವಿಲ್ಲ. ಹೊಸ ಸಿಬ್ಬಂದಿಯ ನೇಮಕಾತಿ 1985ರಿಂದ ತೀವ್ರವಾಗಿ ಕುಂಠಿತವಾಗಿದೆ. ಸಿಬ್ಬಂದಿ ಕೊರತೆಯನ್ನು ನಿವಾರಿಸಲು ಗಣಕೀಕರಣಕ್ಕೆ ಒತ್ತು ನೀಡಲಾಗುತ್ತಿದೆ. ಕಾರ್ಮಿಕ ಸಂಘಗಳೂ ಗಣಕೀಕರಣದ ಅನಿವಾರ್ಯತೆಯನ್ನು ಮನಗಂಡಿರುವುದರಿಂದ ಅವುಗಳ ವಿರೋಧ ಗಣನೀಯವಾಗಿ ತಗ್ಗಿದೆ. ಬರಲಿರುವ ವರ್ಷಗಳಲ್ಲಿ ಹೆಚ್ಚು ಹೆಚ್ಚು ಶಾಖೆಗಳು ಗಣಕೀಕರಣಗೊಳ್ಳುವುದರಿಂದ ಬ್ಯಾಂಕುಗಳ ಬಂಡವಾಳ ವೆಚ್ಚ ಏರುತ್ತದೆ.

### ಇತರ ಸಮಸ್ಯೆಗಳು

ಬ್ಯಾಂಕುಗಳು ಎದುರಿಸುತ್ತಿರುವ ಇನ್ನೂ ಹಲವಾರು ಸಮಸ್ಯೆಗಳಿವೆ. ಗ್ರಾಮೀಣ ಬ್ಯಾಂಕುಗಳ ಭವಿಷ್ಯದ ಪ್ರಶ್ನೆ ಇತ್ಯರ್ಥವಾಗಿಲ್ಲ. ಕೇಂದ್ರ ಆಯವ್ಯಯ ಪತ್ರ ಮಂಡನೆಯಲ್ಲಿ 50 ಗ್ರಾಮೀಣ ಬ್ಯಾಂಕುಗಳನ್ನು ಬಲಗೊಳಿಸುವ ಸೂಚನೆ ಮಾತ್ರ ಇದೆ. ಇದನ್ನು ಜಾರಿಗೊಳಿಸುವಲ್ಲಿ ವಿಳಂಬವಾಗುವುದು ಖಚಿತ. ನಿರ್ಧಾರ ಜಾರಿಗೊಂಡರೂ ಮೂಲಭೂತ ಸಮಸ್ಯೆಗಳು ಮುಂದುವರಿಯುತ್ತವೆ ಎಂದು ಖಚಿತವಾಗಿ ನಿರೀಕ್ಷಿಸಬಹುದು. ಏಕೆಂದರೆ ಕೇವಲ ಹಣ ಒದಗಿಸುವುದರಿಂದ ಪರಿಹಾರವಾಗುವ ಸಮಸ್ಯೆ ಇದಲ್ಲ. ಬ್ಯಾಂಕುಗಳ ಖಾಸಗೀಕರಣದ ಪ್ರಶ್ನೆಯೂ ಇದೆಯಾದರೂ ಅದನ್ನು ಸದ್ಯಕ್ಕೆ ಬದಿಗಿಡಲಾಗಿದೆ. ಕಾರ್ಮಿಕ ಸಂಘಟನೆಗಳ ಬಲವಾದ ವಿರೋಧ ಈ ತಟಸ್ಥನೀತಿಗೆ ಇಂಬುಕೊಟ್ಟಿರಬಹುದು. ಈ ಮಧ್ಯೆ ಬ್ಯಾಂಕ್ ಶಾಖೆಗಳನ್ನು ಮುಚ್ಚುವುದರ ಬಗೆಗೆ ಗಮನ ಹರಿಸಲಾಗುತ್ತಿದೆ. ಇದು ಅನಿವಾರ್ಯವೇ ಎಂದು ಕೆಲವು ವಲಯಗಳಲ್ಲಿ ಬಲವಾಗಿ ನಂಬಲಾಗಿದ್ದರೂ ಶಾಖೆಗಳನ್ನು ಮುಚ್ಚುವ ಕಾರ್ಯದಲ್ಲೂ ತೊಡಕುಗಳಿವೆ. ಕಾರ್ಮಿಕ ಸಂಘಗಳ ವಿರೋಧದಿಂದ ಈ ನಿಟ್ಟಿನಲ್ಲೂ ಬ್ಯಾಂಕುಗಳು ಏನೂ ಮಾಡಲು ಸಾಧ್ಯವಾಗಿಲ್ಲ.

### ನೌಕರ–ನಿರ್ವಾಹಕ ಸಂಬಂಧ

ಬ್ಯಾಂಕಿಂಗ್ ಕ್ಷೇತ್ರದಲ್ಲಿ ಕೈಗಾರಿಕಾಸಂಬಂಧಗಳು ಸದ್ಯಕ್ಕಂತೂ ತೃಪ್ತಿಕರವಾಗಿಲ್ಲ. 1994ರಲ್ಲೇ ಬ್ಯಾಂಕ್ ನೌಕರರು ಮೂರ್‍ನಾಲ್ಕು ದಿನ ಮುಷ್ಕರ ಹೂಡಿದ್ದರು. ಜಾರಿಗೆ ಬರಬೇಕಾದ ವೇತನ ಪರಿಷ್ಕರಣ ನನೆಗುದಿಗೆ ಬಿದ್ದಿತ್ತು. ಸರಕಾರ ತೋರಬೇಕಾದಷ್ಟು ಆಸಕ್ತಿಯನ್ನು ತೋರುತ್ತಿಲ್ಲ. ಬ್ಯಾಂಕುಗಳು ಸಾಕಷ್ಟು ಲಾಭಗಳಿಸುತ್ತಿದ್ದಾಗ ಪರಿಸ್ಥಿತಿ ಹೀಗಿರಲಿಲ್ಲ. ವೇತನ ಪರಿಷ್ಕರಣ ಒಪ್ಪಂದದಿಂದ ಬ್ಯಾಂಕುಗಳ ಖರ್ಚು ಏರುತ್ತದೆ. ಬ್ಯಾಂಕುಗಳಿಗೆ ಇದನ್ನು ಭರಿಸಲು ಸಾಧ್ಯವಾಗುವುದೆ ? ಎಂಬ ಆತಂಕ ಸರಕಾರಕ್ಕೆ ಇದೆ. ಬ್ಯಾಂಕ್ ಕಾರ್ಮಿಕರಂತೂ ಅತೃಪ್ತರಾಗಿದ್ದಾರೆ, ಬ್ಯಾಂಕುಗಳ ಈ ದುಃಸ್ಥಿತಿಗೆ ಸರಕಾರದ ನೀತಿಯೇ ಕಾರಣವಾಗಿರುವಾಗ ನಮಗೇಕೆ ಶಿಕ್ಷೆ ? ಎಂಬ ಅವರ ಪ್ರಶ್ನೆಯೂ ನ್ಯಾಯವಿದ್ದೀತು.

### ಕರಡು ಸಾಲ

ಕರಡುಸಾಲದ ಸಮಸ್ಯೆಯೂ ಗಂಭೀರವಾಗಿಯೇ ಇದೆ.* ಬ್ಯಾಂಕ್ ಸಾಲಗಳ ವಸೂಲಾತಿಗಾಗಿ ವಿಶೇಷನ್ಯಾಯಾಧಿಕರಣಗಳನ್ನು ಸ್ಥಾಪಿಸುವುದಾಗಿ 1993ರ ಆರಂಭದಲ್ಲಿ ಮಾಡಿದ್ದ ಘೋಷಣೆ ಇನ್ನೂ ಆಶ್ವಾಸನೆಯ ಹಂತದಲ್ಲೇ ಇದೆ. ಅದು ಜಾರಿಗೆ ಬರಲು ಇನ್ನೆಷ್ಟು ಕಾಲ ಬೇಕೋ !

*ಠೇವಣಿ ವಿಮೆ ಮತ್ತು ಉದರಿ ಖಾತರಿ ನಿಗಮ ವಿಮೆಯೂ ಬ್ಯಾಂಕುಗಳಿಗೆ ಪ್ರಯೋಜನಕಾರಿಯಾಗಿಲ್ಲ. ಇದರಿಂದ ಅತೃಪ್ತಿಗೊಂಡ ಹಲವು ಪ್ರಮುಖ ಬ್ಯಾಂಕುಗಳು ನಿಗಮದ ವ್ಯಾಪ್ತಿಯಿಂದ ಹೊರಗೆ ಉಳಿಯುವ ಸಾಧ್ಯತೆಗಳು ಹೆಚ್ಚಾಗಿದೆ.

ಒಟ್ಟಿನಲ್ಲಿ ಬ್ಯಾಂಕುಗಳಿಗೆ ಇದು ಬಿಕ್ಕಟ್ಟಿನ ಸಮಯ. ಆರ್ಥಿಕ ಉದಾರೀಕರಣದ ಕೆಲವು ಪರಿಣಾಮಗಳನ್ನು ಬ್ಯಾಂಕುಗಳು ಜೀರ್ಣಿಸಿಕೊಳ್ಳಲಾಗಿಲ್ಲ. ಹಲವು ಸಂಕಟಗಳೂ, ವಿವಿಧ ರೀತಿಯ ಆತಂಕಗಳೂ ಬ್ಯಾಂಕುಗಳನ್ನು ಧೃತಿಗೆಡಿಸಿವೆ. ಪರಿಹಾರೋಪಾಯಗಳು ಕಂಡರೂ ಅವನ್ನು ಅನುಷ್ಠಾನಕ್ಕೆ ತರುವಲ್ಲಿ ದಿಟ್ಟತನದ ಕೊರತೆ ಕಾಣುತ್ತಿದೆ. ●

---



---

### ನಮೂನೆ IV


ಪತ್ರಿಕೆಯ ಒಡೆತನ ಮತ್ತು ಇತರ ವಿವರಗಳನ್ನು ಕುರಿತ ಹೇಳಿಕೆ
ಪತ್ರಿಕೆಗಳ ನೋಂದಣಿ ಕುರಿತ (ಕೇಂದ್ರದ)
ನಿಯಮಾವಳಿಯ ನಿಯಮ 8ರಂತೆ

**ಪತ್ರಿಕೆಯ ಹೆಸರು :** ಬ್ಯಾಂಕಿಂಗ್ ಪ್ರಪಂಚ

**ಪ್ರಕಟಣೆಯ ಸ್ಥಳ :** ಬೆಂಗಳೂರು 560 002

**ಪ್ರಕಟಣೆಯ ಅವಧಿ** ತ್ರೈಮಾಸಿಕ

**ಮುದ್ರಕರು :** ಜಿ. ಎಚ್. ಕೃಷ್ಣಮೂರ್ತಿ (ಭಾರತೀಯ), ಮೈಸೂರು ಪ್ರಿಂಟಿಂಗ್ ಪ್ರೆಸ್, 1210 ಕಾಂತರಾಜ ಅರಸು ರಸ್ತೆ, ಕೃಷ್ಣಮೂರ್ತಿಪುರಂ, ಮೈಸೂರು 570 005

**ಪ್ರಕಾಶಕರು :** ಪಾ. ರಾಜಗೋಪಾಲ (ಭಾರತೀಯ), ಪ್ರಧಾನ ಕಾರ್ಯದರ್ಶಿ, ಭಾರತೀಯ ಸ್ಟೇಟ್ ಬ್ಯಾಂಕ್ ಕನ್ನಡ ಸಂಘಗಳ ಸಮನ್ವಯ ಸಮಿತಿ (ನೋಂ). 22 ಜಯಚಾಮರಾಜೇಂದ್ರ ರಸ್ತೆ, ಬೆಂಗಳೂರು 560 002

**ಸಂಪಾದಕರು :** ಎಚ್ಚೆಸ್ಕೆ (ಎಚ್. ಎಸ್. ಕೃಷ್ಣಸ್ವಾಮಿ ಅಯ್ಯಂಗಾರ್), (ಭಾರತೀಯ). 41 ಆರನೆಯ ಮುಖ್ಯ ರಸ್ತೆ, ಸರಸ್ವತೀಪುರ, ಮೈಸೂರು 570 009

**ಪತ್ರಿಕೆಯ ಒಡೆತನ :** ಸಮನ್ವಯ ಸಮಿತಿ (ನೋಂ), ಭಾರತೀಯ ಸ್ಟೇಟ್ ಬ್ಯಾಂಕ್ ಕನ್ನಡ ಸಂಘಗಳು, 22 ಜಯಚಾಮರಾಜೇಂದ್ರ ರಸ್ತೆ, ಬೆಂಗಳೂರು 560 002

ಮೇಲೆ ನೀಡಿರುವ ವಿವರಗಳು ನನ್ನ ಸಾಧ್ಯವಾದಮಟ್ಟಿಗಿನ ತಿಳಿವಳಿಕೆ ಮತ್ತು ನಂಬಿಕೆಯ ಪ್ರಕಾರ ಸತ್ಯವಾಗಿವೆಯೆಂದು ನಾನು, ಪಾ. ರಾಜಗೋಪಾಲ, ಈ ಮೂಲಕ ಘೋಷಿಸುತ್ತೇನೆ.

ಪಾ. ರಾಜಗೋಪಾಲ
ಪ್ರಕಾಶಕ

# ಹೊಸ ನಷ್ಟಸಂಭಾವ್ಯತೆಗಳು: ಸಮಕಾಲೀನ ಬ್ಯಾಂಕರನಿಗೆ ಹತ್ತು ಸೂತ್ರಗಳು

ಭಾಷಾಂತರ: ಮದನಮೋಹನರಾವ್

ಬ್ಯಾಂಕಿಂಗ್ ಕ್ಷೇತ್ರದಲ್ಲಿ ನಷ್ಟಸಂಭಾವ್ಯತೆಗಳು ಹೆಚ್ಚುತ್ತಿವೆಯೆ? ಹೊಸ ಹೊಸ ನಷ್ಟಸಂಭಾವ್ಯತೆಗಳು ಹುಟ್ಟಿಕೊಳ್ಳುತ್ತಿವೆಯೆ? ಅಥವಾ ಪರಿಚಾಲನೆಯ ಪರಿಸರ ಹೆಚ್ಚು ಅಪಾಯಕಾರಿಯಾಗಿ ಬೆಳೆದಿದೆಯೆ? ಹೇಳುವುದು ಕಷ್ಟ. ಏನೇ ಇರಲಿ, ನಷ್ಟಸಂಭಾವ್ಯತೆಗಳನ್ನೆದುರಿಸಲು ಹತ್ತು ಸೂತ್ರಗಳು ಇಲ್ಲಿವೆ.

ಬ್ಯಾಂಕಿಂಗ್ ವ್ಯವಹಾರದಲ್ಲಿ 'ಹೊಸ' ನಷ್ಟಸಂಭಾವ್ಯತೆಗಳು ವಾಸ್ತವವಾಗಿ ಹೊಸ ನಷ್ಟಸಂಭಾವ್ಯತೆಗಳ ವರ್ಗಗಳನ್ನು ರೂಪಿಸುವುದಿಲ್ಲವಾದರೂ ಇವನ್ನು ಬ್ಯಾಂಕಿಂಗ್ ಉದ್ಯಮದ ಸಾಂಪ್ರದಾಯಿಕ ನಷ್ಟಸಂಭಾವ್ಯತೆಯ ಪರಿಕಲ್ಪನೆಗಳೊಳಗೆ ಹೆಚ್ಚು ತೃಪ್ತಿಕರವಾಗಿ ಸಮಾವೇಶಗೊಳಿಸಬಹುದೆಂಬುದನ್ನು ನಾವು ಕಂಡಿದ್ದೇವೆ. ಆದಾಗ್ಯೂ, ಹೊಸ ತಂತ್ರಗಳ ಪರಿಚಯ ಮತ್ತು ಸ್ಪರ್ಧಾತ್ಮಕ ಸನ್ನಿವೇಶಗಳಲ್ಲಿಯ ಕ್ಷಿಪ್ರಗತಿಯ ಬದಲಾವಣೆಯೊಂದಿಗೆ ಹೊಸ ಸಂಲೇಖಗಳು ಮತ್ತು ಅವುಗಳನ್ನು ವಾಣಿಜ್ಯೀಕರಿಸಿದ ವೇಗವು, ಈ ನಷ್ಟಸಂಭಾವ್ಯತೆಗಳ ಕೆಲವು ಮುಖಗಳನ್ನು ಸಾರ್ವಜನಿಕರ ದೃಷ್ಟಿಯಲ್ಲಿಡುವಂತೆ ಮಾಡಿವೆ.

ಇದರ ಫಲವಾಗಿ, ಬ್ಯಾಂಕಿಂಗ್ ಈಗಾಗಲೆ ಹೆಚ್ಚು ನಷ್ಟಸಂಭಾವ್ಯತೆಯುಂಡಾಗಿದೆಯೆ ಮತ್ತು ಅದು ಮುಂದೆ ಇನ್ನೂ ಹೆಚ್ಚು ನಷ್ಟಸಂಭಾವ್ಯತೆಯುಂಡಾಗುತ್ತದೆಯೆ? ಅಭಿಪ್ರಾಯಗಳು ವಿಭಿನ್ನವಾಗಿವೆ. ಹೌದು ಎನ್ನುವವರು ಹೊಸ ನಿಯಂತ್ರಕ ತಡೆಗಳನ್ನು ಶೀಘ್ರವಾಗಿ ಸೂಚಿಸುವವರಾಗಿದ್ದಾರೆ. ಆದರೆ ಈ ಪ್ರಶ್ನೆಯನ್ನು ಹೆಚ್ಚು ಖಚಿತವಾಗಿ ವ್ಯಾಖ್ಯಿಸಬೇಕೆಂದು ಭಾವಿಸುತ್ತೇನೆ. ಬ್ಯಾಂಕಿಂಗ್ ವ್ಯವಹಾರದಲ್ಲಿ ನಷ್ಟಸಂಭಾವ್ಯತೆಗಳು ಅಧಿಕಗೊಂಡಿವೆ ಎಂದು ಹೇಳುವುದು ಒಂದು ರೀತಿ ಮತ್ತು ಬ್ಯಾಂಕುಗಳ ಪರಿಚಾಲನಾ ಪರಿಸರ ಹೆಚ್ಚು ಅಪಾಯಕಾರಿಯಾಗಿ ಬೆಳೆದಿದೆ ಎಂದು ಹೇಳುವುದು ತೀರ ಇನ್ನೊಂದು ರೀತಿ. ಎರಡನೆಯ ಮಾತು ಖಂಡಿತವಾಗಿಯೂ ಸತ್ಯ. ಆದರೆ ಈ ಪ್ರಕ್ರಿಯೆಯಲ್ಲಿ ಬ್ಯಾಂಕಿಂಗ್ ವ್ಯವಹಾರವು ಹೆಚ್ಚು ನಷ್ಟಸಂಭಾವ್ಯತೆಯುಂಡಾಗಿದೆಯೋ ಇಲ್ಲವೋ ಎಂಬುದನ್ನು ಅಂತಿಮವಾಗಿ ನಿರ್ಧರಿಸಲು ಆಯಾ ಬ್ಯಾಂಕರರುಗಳಿಗೆ ಬಿಟ್ಟಿದೆ. ಹೆಚ್ಚು ಸಂಕೀರ್ಣವಾದ, ಹೆಚ್ಚು ಅಪಾಯಕಾರಿಯಾದ ಮತ್ತು ನಿರಂತರ ಬದಲಾಗುತ್ತಿರುವ ಪರಿಸರದೊಂದಿಗೆ ಹೊಂದಿಕೊಳ್ಳಲು ಮತ್ತು ಈ ಪರಿಸರ ಧ್ವನಿಸುವ ಸವಾಲುಗಳ ಮೇಲೆ ಪ್ರಭುತ್ವ ಸ್ಥಾಪಿಸಲು ಹೊಸ ಉಪಾಯಗಳನ್ನು ರೂಪಿಸುವುದು ಬ್ಯಾಂಕರನಿಗೆ ಬಿಟ್ಟದ್ದು. ಈ ಮೇಲೆ ವಿವರಿಸಲಾದ ನಷ್ಟಸಂಭಾವ್ಯತೆಯ ಪರಿಸರ ಮತ್ತು ಅವು ಧ್ವನಿಸುವ ಸವಾಲುಗಳ ದೃಷ್ಟಿಯಿಂದ ಬ್ಯಾಂಕರನ ಮುಖ್ಯ ಕರ್ತವ್ಯಗಳನ್ನು ನಾವು ಹೀಗೆ ಸೂತ್ರೀಕರಿಸಬಹುದು. ಈ ಕರ್ತವ್ಯಗಳನ್ನು ಹತ್ತು ಸೂತ್ರ ಅಥವಾ ಸಿದ್ಧಾಂತಗಳಲ್ಲಿ ಸಾರಾಂಶಗೊಳಿಸಲು ಪ್ರಯತ್ನಿಸುತ್ತೇನೆ.

## ವಿವೇಕಯುತ ಬ್ಯಾಂಕಿಂಗ್ ಇನ್ನೂ ತನ್ನ ಶೈಲಿಯನ್ನು ಕಳೆದುಕೊಂಡಿಲ್ಲ

ಇದಕ್ಕೆ ಪ್ರತಿಯಾಗಿ, ಅಧಿಕ ಸಂಖ್ಯೆಯ, ಸತ್ವಯುತವಾದ, ಆದರೆ ಇದುವರೆಗೆ ನಿರೀಕ್ಷಿಸಿಲ್ಲದ ನಷ್ಟಸಂಭಾವ್ಯತೆಗಳೆಂದರೆ ವ್ಯವಹಾರಕ್ಕೆ ವಿಮರ್ಶಾತ್ಮಕವಾದ ಹಾಗೂ ಎಚ್ಚರಿಕೆಯ ಮಾರ್ಗವೂ ಬದುಕುಳಿಯುವುದಕ್ಕಾಗಿರುವ ದೀರ್ಘಾವಧಿ ಯೋಜನೆಯಾಗಿದೆ. ಹೇಗಿದ್ದರೂ ವಿವೇಕಯುತ ಬ್ಯಾಂಕಿಂಗ್ ಅನ್ನು ಕೇವಲ ನಿರ್ದಿಷ್ಟ ವ್ಯವಹಾರದ ಅವಕಾಶಗಳ ಶ್ರಮಪೂರ್ಣ ಪರೀಕ್ಷಣ ಹಾಗೂ ಮೌಲೀಕರಣವೆಂದು ತಿಳಿಯಲಾಗದು. ಇದು ವ್ಯವಸ್ಥಾಪನದ ಒಂದು ಹೊಣೆಗಾರಿಕೆ ಕೂಡ. ಕಾನೂನಿನ ಅಗತ್ಯಗಳನ್ನು ಹಾಗೂ ಬ್ಯಾಂಕಿನ ಸ್ವಂತ ನಿಬಂಧನೆಗಳನ್ನು ಮೀರಿ ನಿಲ್ಲುವ ಶಿಷ್ಟತೆಗಳನ್ನು ಸಮಂಜಸವಾಗಿ ಅಳವಡಿಸಬಹುದಾದ ಗುಣಾನುಸ್ಥಾಪಿತ ಉದರಿ ಸಂಸ್ಕೃತಿಯನ್ನು ಬ್ಯಾಂಕಿನ ಒಳಗಡೆ ಪ್ರವರ್ತಿಸುವುದು ವ್ಯವಸ್ಥಾಪನದ ಪಾತ್ರವಾಗಬೇಕು. ಬ್ಯಾಂಕಿನ ಆಂತರಿಕ ನಿಯಮಗಳನ್ನು ನಿವಾರಿಸಿಕೊಳ್ಳುವ ಹಾಗೂ ಬ್ಯಾಂಕಿಂಗ್ ಕಾನೂನಿನ ಲೋಪದೋಷಗಳನ್ನು ಬಳಸಿಕೊಳ್ಳುವ ಮಾರ್ಗಗಳ ನಿರಂತರ ಅನ್ವೇಷಣೆ ಇಂತಹ ನಿಗಮಸಂಸ್ಕೃತಿಯೊಂದಿಗೆ ಹೊಂದಿಕೊಳ್ಳುವುದಿಲ್ಲವೆಂಬುದು ಸ್ಪಷ್ಟ.

## ವಿವರವಾದ ನಷ್ಟಸಂಭಾವ್ಯತೆಯ ಮಾಹಿತಿ ಅನಿವಾರ್ಯವಾಗಿದೆ

ಹೊಸ ಮಾರುಕಟ್ಟೆ ಸಂಲೇಖಗಳ ಸಂಕೀರ್ಣತೆ ಮತ್ತು ಮಾರುಕಟ್ಟೆಯಲ್ಲಿನ ಸೂಕ್ಷ್ಮ ತುಯ್ದಾಟಕ್ಕೂ ಅವುಗಳ ಸ್ಪಂದಿಸುವಿಕೆಯು

ದೃಷ್ಟಿಯಿಂದ ಒಂದು ಸತ್ವಯುತವಾದ ನಷ್ಟಸಂಭಾವ್ಯತಾ ಮಾಹಿತಿ ವ್ಯವಸ್ಥೆ ಅತ್ಯಾವಶ್ಯಕ. ಸ್ಥೂಲವಾಗಿ ಈ ನಷ್ಟ ಸಂಭಾವ್ಯತಾ ಮಾಹಿತಿ ಶೀಘ್ರವಾಗಿ ದೊರೆಯಬೇಕು ಮತ್ತು ಅದು ಬುದ್ಧಿವಂತ ನಮೂನೆಯಲ್ಲಿರಬೇಕು. ಅಲ್ಲದೆ ಬ್ಯಾಂಕಿನ ನಷ್ಟಸಂಭಾವ್ಯತೆಗೆ ಒಳಗಾಗುವಿಕೆಯ ವಿವಿಧ ಅಂಶಗಳನ್ನು ಒಗ್ಗೂಡಿಸುವ ಸಾಮರ್ಥ್ಯವನ್ನು ಹೊಂದಿರಬೇಕು. ಅಭಿವ್ಯಕ್ತಿಯ ಹಾಗೂ ಪರಸ್ಪರಾವಲಂಬನೆಯ ಕೇಂದ್ರೀಕರಣಗಳನ್ನು ಯಾವುದೇ ಸಮಯದಲ್ಲಿ ಗುರುತಿಸಲು ಸಾಧ್ಯವಾಗುವಂತಿರಬೇಕು.

## ನಷ್ಟಸಂಭಾವ್ಯತೆಯ ನಿರ್ವಹಣೆ ಉನ್ನತ ವ್ಯವಸ್ಥಾಪನದ ಜವಾಬ್ದಾರಿಯಾಗಿದೆ

ವರ್ತಕರಿಗೆ, ತಮ್ಮ ಉತ್ಪಾದನೆಗಳನ್ನು ತಿಳಿದುಕೊಳ್ಳುವುದು ಹಾಗೂ ಅವುಗಳ ಅಭಿವ್ಯಕ್ತಿಯನ್ನು ನಿರ್ವಹಿಸುವುದಷ್ಟೆ ಸಾಲದು. ಸಂಘಟನೆಯ ಮೇಲ್‌ಸ್ತರದಲ್ಲಿರುವ ಧುರೀಣರೂ ಕೂಡ ಈ ಉತ್ಪಾದನೆಗಳ ಬಗ್ಗೆ ವಿವರವಾಗಿ ತಿಳಿದಿರಬೇಕು ಮತ್ತು ಯಾವ ನಷ್ಟಸಂಭಾವ್ಯತೆಗಳನ್ನು ಎದುರಿಸಬೇಕು, ಅಭಿವ್ಯಕ್ತಿಯನ್ನು ಹೇಗೆ ಬಳಸಿಕೊಳ್ಳಬೇಕು ಮತ್ತು ಭದ್ರತಾ ಅವಕಾಶಗಳು ಯಾವುವು ಎಂಬುದನ್ನು ತಮ್ಮ ವಾಪಾರ ಮುಂಗಟ್ಟುಗಳಿಗೆ ತಿಳಿಸುವ ಅವಶ್ಯಕತೆಯೂ ಇದೆ. ನಿಗಮವ್ಯವಸ್ಥಾಪನೆಯು ಗುರಿಗಳನ್ನು ತಲುಪಬೇಕಾದರೆ ನಿರ್ವಹಣೆ ಮತ್ತು ನಿಯಂತ್ರಣ ತಂತ್ರಗಳು ಅತಿ ಹೆಚ್ಚಿನ ಶಿಸ್ತಿನಲ್ಲಿ ಕೆಲಸಮಾಡಬೇಕು.

## ನಿಬಂಧನೆಗಳನ್ನು ಪಾಲಿಸುವುದಷ್ಟೆ ಸಾಲದು

ಬ್ಯಾಂಕೊಂದು ನಿಯಮಗಳನ್ನು ತಾತ್ಕಾಲಿಕವಾಗಿ ಉಲ್ಲಂಘಿಸಿಯೂ ಬದುಕುಳಿಯಲು ಸಾಧ್ಯವಾಗಬಹುದು. ಆದರೆ ಈ ಎಲ್ಲ ನಿಬಂಧನೆಗಳನ್ನು ಅನುಸರಿಸಿಯೂ ಉಳಿಯಬಲ್ಲುದೆ ? ಹೌದೆಂದು ನಾನು ಭಾವಿಸುತ್ತೇನೆ. ರಾಜ್ಯದ (ರಾಷ್ಟ್ರದ) ಮೇಲ್ವಿಚಾರಣೆ ಬ್ಯಾಂಕಿನ ಆಡಳಿತಗಾರರನ್ನು ಅವರ ಉದ್ಯಮಶೀಲತೆಯ ಪಾತ್ರ ಮತ್ತು ಜವಾಬ್ದಾರಿಯಿಂದ ಬಿಡುಗಡೆ ಮಾಡುವುದಿಲ್ಲ.

## ಬ್ಯಾಂಕರನಿಗೆ ಹೆಚ್ಚಿನ ತಂತ್ರಜ್ಞಾನದ ಅಗತ್ಯವಿದೆ. ಆದರೆ ತಂತ್ರಜ್ಞಾನ ಬ್ಯಾಂಕರನ ಸ್ಥಾನವನ್ನು ತುಂಬಲಾರದು

ಬ್ಯಾಂಕಿಂಗ್ ವಿಶಾಲಾರ್ಥದಲ್ಲಿ ಮಾಹಿತಿ ಪ್ರಕ್ರಿಯೆಯಾಗಿದ್ದು ಗ್ರಾಹಕ ಸಂಪರ್ಕಗಳು ಮತ್ತು ಸಂದೇಶ ಜಾಲಗಳಿಂದ (ಮಾಹಿತಿ ಜಾಲಗಳಿಂದ) ಮೊದಲುಗೊಂಡು ಸಂಕೀರ್ಣ ಸಂಲೇಖಗಳ ವಿಶ್ಲೇಷಣೆ ಮತ್ತು ಜಾಗತಿಕ ಕಣ್ಗಾವಲು ವ್ಯವಸ್ಥೆಗಳ ಪರಿಚಾಲನೆ ಹಾಗೂ ಬ್ಯಾಂಕ್ ವಹಿವಾಟುಗಳ ಯಾಂತ್ರೀಕರಣದವರೆಗೂ ಮುಂದುವರಿಯುವುದಾಗಿದೆ. ಹೀಗೆ ಇತ್ತೀಚಿನ ಗಣಕ (ಕಂಪ್ಯೂಟರ್) ತಂತ್ರಜ್ಞಾನ ಮುಂದಿನ ಯಶಸ್ಸಿನ ಒಂದು ಪೂರ್ವ-ನಿಬಂಧನೆಯಾಗಿದೆ. ನಿರ್ಣಯ ತೆಗೆದುಕೊಳ್ಳುವಲ್ಲಿ ಕಂಪ್ಯೂಟರುಗಳು ಕೂಡ ಗಮನಾರ್ಹ ಅಂಶಗಳಾಗಿವೆ.

ಆದರೆ ಈ ಎಲ್ಲ ಯಾಂತ್ರೀಕರಣ ಹಾಗೂ ಹೆಚ್ಚು ಜಾಣ ತಂತ್ರಜ್ಞಾನಗಳಿದ್ದಾಗ್ಯೂ, ಈ ವ್ಯವಸ್ಥೆಗಳನ್ನು ಬ್ಯಾಂಕರನ ಬದಲು ತರುವ ಹಾಗಿಲ್ಲ. ಗಣಕೀಕೃತ ಆಧೋರಚನೆ ಆಧರಿಸಬಹುದಾದಂತಹ ನವೋನ್ಮೇಷ ಹಾಗೂ ನಿರ್ಮಾಣಾತ್ಮಕ ಗುರಿಗಳನ್ನು ಹೊಂದಿಸುವವ ಬ್ಯಾಂಕರನೇ ಆಗಿದ್ದಾನೆ; ನಷ್ಟಸಂಭಾವ್ಯತೆಯ ತಾಳ್ಮೆಯ ಮಟ್ಟವನ್ನು ವ್ಯಾಖ್ಯಾನಿಸುವವನೂ ಬ್ಯಾಂಕರನೇ ಆಗಿದ್ದಾನೆ ಮತ್ತು ಈ ಜವಾಬ್ದಾರಿಯನ್ನು ಬ್ಯಾಂಕರ್ ಮಾತ್ರ ಹೊರಬಲ್ಲ. ಅಂತಿಮ ವಿಶ್ಲೇಷಣೆಯಲ್ಲಿ ಬ್ಯಾಂಕರ್ ತನ್ನ ತೀರ್ಪು ಅಥವಾ ವೃತ್ತಿಯ ಪ್ರವೃತ್ತಿಗಳಿಗೆ ಯಾವುದಾದರೂ ವಿರುದ್ಧವಾದಲ್ಲಿ ಅದಕ್ಕೆ ಬ್ಯಾಂಕರನೇ ನಕಾರವನ್ನು ಹೇಳಬೇಕು.

## ಎಲ್ಲ ನಷ್ಟಸಂಭಾವ್ಯತೆಗಳನ್ನು ಲೆಕ್ಕಹಾಕಲಾಗುವುದಿಲ್ಲ

ಆಧುನಿಕ ಹಣಕಾಸು ಮಾರುಕಟ್ಟೆ ಶಾಸ್ತ್ರ ನಮಗೆ ಅನೇಕ ಅಮೂಲ್ಯ ಸಂಲೇಖಗಳನ್ನು ವಿಶ್ಲೇಷಿಸುವುದಕ್ಕೂ, ಪರಾಮರ್ಶಿಸುವುದಕ್ಕೂ ನಷ್ಟವಿರೋಧ ವಹಿವಾಟಿನ ನಷ್ಟಸಂಭಾವ್ಯತೆಗಳನ್ನು ನೀಡುತ್ತದೆ. ನಷ್ಟಸಂಭಾವ್ಯತೆ/ಪ್ರತಿಫಲ ಲೆಕ್ಕಾಚಾರಗಳ ಗ್ರಾಹಕರಿಗಾಗಿ ಸಂಪುಟ ನಿರ್ವಹಣೆಯ ಮತ್ತು ಸ್ವತಃ ಬ್ಯಾಂಕುಗಳಿಗಾಗಿ ಆಸ್ತಿ ಹಾಗೂ ಹೊಣೆ ನಿರ್ವಹಣೆಯ ಹಿಂದಿನ ಅಂತಃಸತ್ವವಾಗಿದೆ. ಈ ತಂತ್ರಗಳು ಹಾಗೂ ಅವುಗಳ ಹಿಂದಿರುವ ವಿಚಾರಗಳು ಇಲ್ಲಿ ನೆಲೆಗೊಳ್ಳುತ್ತವೆ. ಅವುಗಳು ಇನ್ನೂ ಹೆಚ್ಚು ಬಳಕೆಯಾಗಬೇಕಾಗಿದೆ.

ಆದರೆ, ಎಲ್ಲ ನಷ್ಟಸಂಭಾವ್ಯತೆಗಳನ್ನು ಪರಿಮಾಣೀಕರಿಸಬಹುದೆಂದು ನೀವು ವಿಚಾರಮಾಡಿದ್ದಾದರೆ ಆಧುನಿಕ ಹಣಕಾಸು ಮಾರುಕಟ್ಟೆ ಶಾಸ್ತ್ರ ಭದ್ರತೆಯ ಒಂದು ಮಿಥ್ಯಾಭಾವನೆಯನ್ನು ಉಂಟುಮಾಡಬಹುದು. ಒಂದು ಬ್ಯಾಂಕನ್ನು ಕೇವಲ ಸರಾಸರಿ/ವ್ಯತ್ಯಾಸಗಳಿಂದ ಮಾರ್ಗದರ್ಶನ ಮಾಡಲಾಗದು. ಮೇಲಾಗಿ ಅಧಿಕ ಅಸಂಭವನೀಯವಾದ ನಷ್ಟಸಂಭಾವ್ಯತೆಗಳಿಗೂ ಗಮನ ನೀಯಬೇಕು. ಈ ನಷ್ಟಸಂಭಾವ್ಯತೆಗಳು ಅಗತ್ಯವಾಗಿಯೂ ಅನಪೇಕ್ಷಿತ ನಷ್ಟಸಂಭಾವ್ಯತೆಗಳು. ಪರಿಚಾಲನೆಯ ಹಾಗೂ ಯೋಜನಾತ್ಮಕ ನಷ್ಟಸಂಭಾವ್ಯತೆಗಳು ಕೂಡ ಇವುಗಳಿಗೆ ಸಂಬಂಧಿಸಿವೆ. ಏಕೆಂದರೆ ಈ ನಷ್ಟಸಂಭಾವ್ಯತೆಗಳು ನಿಮ್ಮೆಡೆಗೆ ಒಳ್ಳೆಯ ಪರಿಸ್ಥಿತಿಯಲ್ಲಿ ಬರಲು ಹವಣಿಸುತ್ತವೆ.

## ಪ್ರತಿಫಲ ಲಾಭದಂತೆ ಅಲ್ಲ

ಹೊಸ ಸಂಲೇಖಗಳು ಆಗಾಗ್ಗೆ ಗಣನೀಯ ಆದಾಯವನ್ನು ಉತ್ಪಾದಿಸುತ್ತವೆ. ಇದು ಅತಿ ಶೀಘ್ರ ಅವಧಿಯಲ್ಲಿ ಅಸಮಾನುಪಾತದ ಲಾಭಗಳನ್ನು ಸ್ಥಳೀಯ ಅನುಕೂಲತೆಯ ಬಳಕೆಯಿಂದ ಗಳಿಸುವುದರಿಂದಾಗಬಹುದು. ಒಂದು ತಾಂತ್ರಿಕ ಮುನ್ನಡೆಯಿಂದ ಅಥವಾ ಬೇರಾವುದೇ ಸ್ಪರ್ಧಾತ್ಮಕ ಅಂಶದಿಂದಾಗಿರಬಹುದು. ಆದರೆ ಈ ಹೊಸ ಸಂಲೇಖಗಳು ಭಾರೀ ನಷ್ಟಸಂಭಾವ್ಯತೆಗಳನ್ನು ಕೂಡ ತಂದೊಡ್ಡುವ ಸಾಧ್ಯತೆಗಳಿವೆ. ಈ ಪ್ರಸಂಗದಲ್ಲಿ ಪ್ರತಿಫಲ ಹೆಚ್ಚಿನ ನಷ್ಟಸಂಭಾವ್ಯತೆಯನ್ನು ಹೊತ್ತಿದ್ದಕ್ಕಾಗಿ ಪರಿಹಾರವಲ್ಲದ ಮತ್ತೇನನ್ನೂ ಪ್ರತಿನಿಧಿಸುವುದಿಲ್ಲವಾದ್ದರಿಂದ ಎಲ್ಲ ಆದಾಯವನ್ನೂ ಲಾಭವೆಂದು ತಿಳಿಯುವುದು ಒಂದು ದೊಡ್ಡ ತಪ್ಪು.

ಆದ್ದರಿಂದ ವಿವಿಧ ಪ್ರಮಾಣದ ನಷ್ಟಸಂಭಾವ್ಯತೆಯನ್ನು ಹೊಂದಿರುವ ಸಂಲೇಖಗಳಿಗಾಗಿ 'ನಷ್ಟಸಂಭಾವ್ಯತೆಯ ಹೊಂದಾಣಿಕೆಯಾದ ಪ್ರತಿಫಲದ' ಅಂಕಿ-ಅಂಶಗಳನ್ನು ಲೆಕ್ಕಹಾಕುವುದು ಹೆಚ್ಚು ಹೆಚ್ಚು ಅತ್ಯಾವಶ್ಯಕವಾಗುತ್ತಿದೆ. ಗಳಿಕೆಯ ಸ್ಥಿತಿಯ ನಿಜ ಚಿತ್ರ ಕಾಣುವುದಕ್ಕೆ ಮತ್ತು ತುಲನಯೋಗ್ಯ ಕಾರ್ಯಪಾಲನಾ ಪರಿಮಾಣವನ್ನುಂಟುಮಾಡುವುದಕ್ಕೆ ಇದು ಏಕೈಕ ಮಾರ್ಗವಾಗಿದೆ. "ಬಂಡವಾಳದ ಮೇಲೆ ನಷ್ಟಸಂಭಾವ್ಯತೆ ಹೊಂದಾಣಿಕೆ ಮಾಡಿದ ಪ್ರತಿಫಲ" ಹಾಗೂ "ಆಸ್ತಿಗಳ ಮೇಲೆ ನಷ್ಟಸಂಭಾವ್ಯತೆ ಹೊಂದಾಣಿಕೆ ಮಾಡಿದ ಪ್ರತಿಫಲಗಳು", ಕೇವಲ ನಿಗದಿತ ಪ್ರಮಾಣದಲ್ಲಿ ದೊರೆಯುವ ಸಾಮ್ಯಷೇರು ಬಂಡವಾಳದ ಬುನಾದಿಯನ್ನು ನಿಗದಿಪಡಿಸುವುದಕ್ಕೆ ವ್ಯವಸ್ಥಾಪನದ ಮುಖ್ಯ ಸಾಧನಗಳಾಗಿವೆ. ಇದಲ್ಲದೆ, ವಿಶೇಷವಾಗಿ ನವೋನ್ಮೇಷಗಳು ಅಸಮಾನುಪಾತೀಯವಾಗಿ ಹೆಚ್ಚು ಗಳಿಕೆಯನ್ನು ತಮ್ಮ ಉತ್ಪಾದನ ಚಕ್ರಗಳ ಆರಂಭದಲ್ಲಿ ಉಂಟುಮಾಡುತ್ತವಾದರೂ ಈ ಪ್ರತಿಫಲಗಳು ಕಾಲಾನುಕ್ರಮದಲ್ಲಿ ಕರಗುವ ಸಾಧ್ಯತೆಯಿರುವುದರಿಂದ (ಕರಗಲು ಹವಣಿಸುವುದರಿಂದ), ನಿರೀಕ್ಷಿತ ಪ್ರತಿಫಲಗಳಿಗಾಗಿ ಉತ್ಪನ್ನ ವಕ್ರರೇಖೆಯನ್ನೂ ಕೂಡ ಗಮನಿಸಬೇಕು.

## ಸುಭದ್ರ ಬಂಡವಾಳದ ಬುನಾದಿಯ ಆಗತ್ಯ

ಕೇವಲ ನಿರೀಕ್ಷಿತ ನಷ್ಟಸಂಭಾವ್ಯತೆಗಳನ್ನು ಎದುರಿಸಲು ತಕ್ಕಷ್ಟಿರುವ ಬಂಡವಾಳದ ಬುನಾದಿಯನ್ನು ಸುಭದ್ರವೆಂದು ವಿವರಿಸಲಾಗದು. ನಾವು ನೋಡಿರುವಂತೆ, ಖಚಿತವಾಗಿಯೂ ಈ ಮುಂಗಾಣದ ನಷ್ಟಸಂಭಾವ್ಯತೆಗಳು ಹೊಸ ಸಂಲೇಖಗಳಿಗೆ ಸಂಬಂಧಿಸಿದಂತೆ ಪ್ರಮುಖ ಪಾತ್ರವಹಿಸುತ್ತವೆ. ಮತ್ತು ಈ ನಷ್ಟಸಂಭಾವ್ಯತೆಗಳು ಶೀಘ್ರವಾಗಿ ಭಯಾನಕ ಗಾತ್ರವನ್ನು ಹೊಂದಬಲ್ಲುವು. ಹೊಸ ನಷ್ಟಸಂಭಾವ್ಯತೆಗಳಿಗಾಗಿ ಬಂಡವಾಳದ ಆಗತ್ಯದ ನಿರ್ಧಾರಣಕ್ಕಿರುವ ಸಾಂಪ್ರದಾಯಿಕ ಮಾರ್ಗವು ಬ್ಯಾಂಕೊಂದು ವ್ಯವಹಾರದಲ್ಲಿ ದೀರ್ಘಕಾಲ ಉಳಿಯುವುದಕ್ಕಿರುವ ರಚನಾತ್ಮಕ ಮಾರ್ಗವಾಗಿದೆ. ಸಹಜವಾಗಿ ಇದು ಬಂಡವಾಳ ವಿನಿಯೋಜನೆಯ ಮೇಲೆ ತಕ್ಕ ಪ್ರತಿಫಲ ಸಾಧಿಸಲಿಕ್ಕಾಗಿರುವ ಮುಂಚೂಣಿ ಜನರ ಮೇಲಿರುವ ಒತ್ತಡವನ್ನು ಗಣನೀಯವಾಗಿ ಹೆಚ್ಚಿಸುತ್ತದೆ.

ಇನ್ನೊಂದೆಡೆ, ಬಂಡವಾಳದ ಹಿತಕರ ಅವಕಾಶವು ನಿಮಗೆ ಒಂದು ವಿಶೇಷ ಸ್ಪರ್ಧಾತ್ಮಕ ಅನುಕೂಲವನ್ನು ಒದಗಿಸುತ್ತದೆ. ಈ ರೀತಿ ಯಾವ ಬ್ಯಾಂಕುಗಳು ತಮ್ಮ ಉತ್ತಮ ಉದರಿ ನಿರ್ಧಾರಣ ಮಾನಕಗಳನ್ನು ಕಾಪಾಡಿಕೊಂಡಿರುತ್ತವೆಯೋ ಅವುಗಳನ್ನು ವ್ಯವಹಾರದಲ್ಲಿ ಪ್ರತಿಭಾಗೀದಾರರಾಗಿ ಹೊಂದಲು ಹೆಚ್ಚು ಪ್ರಾಶಸ್ತ್ಯ ನೀಡುತ್ತಾರೆ. ಏಕೆಂದರೆ ಗುಣಮಟ್ಟಕ್ಕೆ ಹೆಚ್ಚು ಸ್ಪಂದಿಸುವಂತಾಗಿರುವ ಹೆಚ್ಚುತ್ತಿರುವ ಗ್ರಾಹಕ ವರ್ಗಗಳಿಗೆ ಸೇವೆ ಸಲ್ಲಿಸಲು ಇವುಗಳಿಗೆ ಮಾತ್ರ ಸಾಧ್ಯವಿದೆ.

## ಹೊಸ ಹಣಕಾಸು ಮಾರುಕಟ್ಟೆ ಶಾಸ್ತ್ರದ ಅನ್ವಯ

ಕಳೆದೆರಡು ವರ್ಷಗಳಲ್ಲಿ ಸ್ವಿಸ್ ಬ್ಯಾಂಕುಗಳಿಂದ ನಿರ್ಮಿತ ವಿವರವಾದ ಮುನ್ನೇರ್ಪಾಡುಗಳನ್ನು ತೆಗೆದಿರಿಸಲಾಗಿಲ್ಲ. ಬದಲಿಗೆ ಸಾಂಪ್ರದಾಯಿಕ ಶೈಲಿಯ ವಹಿವಾಟುಗಳಿಗಾಗಿ ಇವೆ. ಹೊಸ ವಿಪದಂತಗಳಿಂದ ಕೂಡಿದ ನಷ್ಟ ನಿರೋಧಿ ತಂತ್ರಗಳಿಂದ ಈ ನಷ್ಟಗಳನ್ನು ನಾವು ತಡೆಗಟ್ಟಬಹುದಾಗಿತ್ತೆ ? ಕಷ್ಟಸಾಧ್ಯ. ಆದಾಗ್ಯೂ ಬ್ಯಾಂಕಿಂಗ್ ವ್ಯವಹಾರದ ಸಾಂಪ್ರದಾಯಿಕ ಹಾಗೂ ಆಧುನಿಕ ವಲಯಗಳ ಭದ್ರವಾದ ಜೋಡಣೆಯು ಬಹು ದಿನಗಳ ಬೇಡಿಕೆಯಾಗಿದೆ. ಹಿಂದೆಂದಿಗಿಂತಲೂ, ಬ್ಯಾಂಕಿನ ಅಂತರಾಳದಲ್ಲಿ, ಸುಧಾರಿತ ಮಾಹಿತಿ ವ್ಯವಸ್ಥೆಗಳು, ಪೃಥಕ್ಕರಣ ಸಂಲೇಖಗಳು ಮತ್ತು ನಷ್ಟವಿರೋಧಿ ತಂತ್ರಗಳನ್ನು ಸಾಂಪ್ರದಾಯಿಕ ರೀತಿಯ ವಹಿವಾಟುಗಳಿಗೂ ಉಪಯೋಗಿಸುವುದನ್ನು ಖಚಿತಪಡಿಸಿಕೊಳ್ಳುವುದು ಅಗತ್ಯ.

ಯಾವ ಬ್ಯಾಂಕು ಇನ್ನೂ ಕಠಿಣವಾದ ಭವಿಷ್ಯತ್ತಿನ ಸ್ಪರ್ಧೆಯಲ್ಲಿ ಗುಂಪಿನ ನಾಯಕನಾಗಿ ಉಳಿಯುತ್ತದೆಯೋ ಅದು ಸಾಂಪ್ರದಾಯಿಕ ಬ್ಯಾಂಕಿಂಗ್ ವ್ಯವಹಾರವನ್ನು ಹೊಸ ತಾಂತ್ರಿಕಸಾಮರ್ಥ್ಯಗಳೊಂದೊಡಗೂಡಿದ ನವೋನ್ಮೇಷ ಉತ್ಪಾದನಗಳು ತನ್ನ ಗ್ರಾಹಕರಿಗೆ ಮಹತ್ವವನ್ನು ನೀಡುವುದೇ ಆಗಿರುತ್ತದೆ. ಇದಕ್ಕಾಗಿ ಮಾರುಕಟ್ಟೆಯ ಅಂತಃಸತ್ವ (ಪಟುತ್ವ) ಇನ್ನೂ ಬಹಳ ಇದೆ.

## ಉದ್ಯಮಶೀಲತೆಯ ದೃಷ್ಟಿ, ಯೋಜನೆ

ಕಳೆದ 10 ವರ್ಷಗಳ ಅನುಭವವು ನಕಲಿ ಉತ್ಪನ್ನಗಳು, ಸಮೂಹ ಪ್ರವೃತ್ತಿಗಳು ಹಾಗೂ ಸಿದ್ಧವಾದುದನ್ನು ಅಳವಡಿಸಿಕೊಳ್ಳುವಿಕೆ ಇವುಗಳು ಕುಶಲತೆಯ ದುಬಾರಿ ಪರ್ಯಾಯಗಳಾಗಿವೆ. "ನಾನೂ ಕೂಡ" ಎನ್ನುವ ಪ್ರವೃತ್ತಿಯು "ಗುಂಪಿನೊಡನೆ ಓಡಿಹೋದ" ಎಂದು ಪರ್ಯವಸಾನವಾಗುವುದಕ್ಕೆ ಒಳ್ಳೆಯ ಉದಾಹರಣೆಯಾಗಿದೆ. ಸ್ಪರ್ಧೆಯ ಬಿಸಿ ಹೆಚ್ಚಿದಂತೆಲ್ಲಾ ನವೀನತೆಯ "ಅರೆಜೀವಗಳು" ಮತ್ತು ಮಾರುಕಟ್ಟೆಗೂಡುಗಳು ಚಿಕ್ಕವಾದಂತೆಲ್ಲ, ಕಲಾಪ್ರಿಯರು, 3–6–3 ಬ್ಯಾಂಕರುಗಳು ಠೇವಣಿಯ ಮೇಲೆ 3% ಕೊಡುವುದು, ಸಾಲವನ್ನು 6% ಕ್ಕೆ ಕೊಡುವುದು ಮತ್ತು ಗಾಲ್ಫ್ ಮೈದಾನಕ್ಕೆ ಮಧ್ಯಾಹ್ನ 3 ಗಂಟೆಗೆ ಸೇರುವುದು ಮತ್ತು ಸಮಯಸಾಧಕ ಚೆರ್ರಿ ಆರಿಸುವವರು (ಕೀಳುವವರು) ತಮ್ಮ ದಿನಗಳು ಕಡಿಮೆಯಿವೆ ಎಂದು ಅರಿಯುವರು. ಏಕೆಂದರೆ ಅವರು ಉದ್ಯಮಶೀಲತೆಯ ನಷ್ಟಸಂಭಾವ್ಯತೆಗಳೊಂದಿಗೆ ಬಹಳ ದಿನ ಸಹಕರಿಸಲಾರರು. ವಿಶೇಷವಾಗಿ ಪ್ರವೇಶದ ಬೆಲೆಯು (ವಿನಿಯೋಜನೆಯ ರೂಪದಲ್ಲಿ) ಹೆಚ್ಚು ಹೆಚ್ಚಾಗುತ್ತಿರುವುದರಿಂದ ಗ್ರಾಹಕರ ಆಗತ್ಯಗಳಿಗೆ ಸರಿಹೊಂದುವ ಯೋಜನೆಗಳು ಹೆಚ್ಚು ಹೆಚ್ಚು ಪ್ರಮುಖವಾಗುತ್ತಿವೆ. ಇದರ ಹಿಂದೆಯೆ ಅವಶ್ಯಕ ಸಂಶೋಧನೆ, ಅಭಿವೃದ್ಧಿ ಮತ್ತು ಉಪಾಯಗಳನ್ನು ಹೊಂದಿದ ದೀರ್ಘಸಳೆತದ ಯೋಜನೆಗಳು ಬ್ಯಾಂಕುಗಳಿಗಾಗಿ ಹೊಸ ಮತ್ತು ಮೂಲಭೂತ ಪಾತ್ರವನ್ನು ಒದಗಿಸುತ್ತವೆ. ನನಗನಿಸಿದಂತೆ, ಈ ಎಲ್ಲದರಿಂದ ಕಲಿಯಬೇಕಾದ ದೊಡ್ಡ ಪಾಠವೆಂದರೆ ಬ್ಯಾಂಕಿಂಗ್ ವ್ಯವಹಾರದ ಮೇಲೆ ಹೊಸ ನಷ್ಟಸಂಭಾವ್ಯತೆಗಳ ಪ್ರಭಾವ ಪ್ರಪ್ರಥಮವಾಗಿ ಬ್ಯಾಂಕರರು ಮುಂಬರುವ ಉದ್ಯಮಶೀಲತೆಯ ಸವಾಲುಗಳಿಗೆ ತಾವಾಗಿ ಹೇಗೆ ಪ್ರತಿಕ್ರಿಯಿಸುತ್ತಾರೆನ್ನುವುದನ್ನು ಅವಲಂಬಿಸಿದೆ ಎನ್ನುವುದಾಗಿದೆ. ●

# ಭಾರತೀಯ ಹಣ ಮಾರುಕಟ್ಟೆ

ಬಿ. ಧ್ಯನನಾರಾಯಣ

**ಅಭಿವೃದ್ಧಿ ಹೊಂದಿದ ದೇಶವೊಂದರ ಹಣ ಮಾರುಕಟ್ಟೆಯೊಂದಿಗೆ ಹೋಲಿಸಿದರೆ ನಮ್ಮ ಹಣ ಮಾರುಕಟ್ಟೆ ಇದ್ದೂ ಶೈಶವ ಸ್ಥಿತಿಯಲ್ಲಿದೆ. ಇದನ್ನು ಸಮಗ್ರವಾಗಿ ಬೆಳೆಸಲು ಹಲವಾರು ಸಲಹೆಗಳು ಬದಿವೆ, ಕ್ರಮಗಳನ್ನು ತೆಗೆದುಕೊಳ್ಳಲಾಗಿವೆ, ಆದರೂ ಇದಿನ್ನೂ ಸಮರ್ಪಕವಾಗಿ ವಿಕಾಸಗೊಂಡಿಲ್ಲ.**

ಮಾರುಕಟ್ಟೆಯೆಂದೊಡನೆಯೇ ನಮ್ಮ ಗಮನ ಸೆಳೆಯುವುದು ಸರಳವಾದ, ನಾವು ದಿನನಿತ್ಯ ವ್ಯವಹರಿಸುವ, ವಸ್ತುಗಳ ಮಾರುಕಟ್ಟೆ. ಆದರೆ ನಾವು ಇಲ್ಲಿ ತಿಳಿದುಕೊಳ್ಳುವ ಮಾರುಕಟ್ಟೆಯೇ ಬೇರೆಯಾಗಿದೆ. ನಾವು ಇಲ್ಲಿ ತಿಳಿದುಕೊಳ್ಳಬೇಕಾಗಿರುವುದು ಹಣ ಮಾರುಕಟ್ಟೆಯ ಬಗ್ಗೆ. ಇಲ್ಲಿ ಹಣವನ್ನು ವಸ್ತುಗಳಂತೆ ಮಾರುವ ಹಾಗೂ ತೆಗೆದುಕೊಳ್ಳುವ ವ್ಯವಹಾರವಿರುವುದಿಲ್ಲ. ಹಣ ಮಾರುಕಟ್ಟೆ ಎಂದರೆ ಅಲ್ಪಾವಧಿಗೆ ಹಣವನ್ನು ಸಾಲವಾಗಿ ಪಡೆಯುವುದು ಹಾಗೂ ಸಾಲಕ್ಕೆ ನೀಡುವುದು. ಆದರೆ ಇಲ್ಲಿ ನಗದು ರೂಪದಲ್ಲಿ ವ್ಯವಹರಿಸಲಾಗುವುದಿಲ್ಲ. ಇಲ್ಲಿ ವ್ಯಾಪಾರ ಪತ್ರಗಳು, ಪ್ರೊನೋಟ್‌ಗಳು ಮತ್ತು ಸರ್ಕಾರಿ ಪತ್ರಗಳ ಮುಖಾಂತರ ವ್ಯವಹರಿಸಲಾಗುವುದು. ಈ ಮಾರುಕಟ್ಟೆಯಲ್ಲಿ ವ್ಯಕ್ತಿಗಳಿಗೆ ಭಾಗವಹಿಸಲು ಅವಕಾಶವಿಲ್ಲ. ಕೆಲವೇ ಹಣಕಾಸಿನ ಸಂಸ್ಥೆಗಳು ಹಾಗೂ ವಾಣಿಜ್ಯ ಬ್ಯಾಂಕುಗಳು ಇಲ್ಲಿ ಭಾಗವಹಿಸಲು ಅವಕಾಶವಿದೆ.

ಹಣ ಮಾರುಕಟ್ಟೆಯನ್ನು ಅರ್ಥಮಾಡಿಕೊಳ್ಳಲು ಇದರ ಕೆಲವು ಲಕ್ಷಣಗಳನ್ನು ತಿಳಿದುಕೊಳ್ಳೋಣ :

### ಹಣ ಮಾರುಕಟ್ಟೆಯ ಮುಖ್ಯ ಲಕ್ಷಣಗಳು

ಮೊದಲನೆಯದಾಗಿ ಇದು ಹಲವು ಉಪ ಮಾರುಕಟ್ಟೆಗಳ ಸಮ್ಮಿಲನ (ಕರೆ ಹಾಗೂ ಸೂಚನೆ ನೀಡುವ ಹಣ ಮಾರುಕಟ್ಟೆ, ವಾಣಿಜ್ಯ ಪತ್ರಗಳ ಮಾರುಕಟ್ಟೆ, ರೇವಣಿ ಪತ್ರಗಳ ಮಾರುಕಟ್ಟೆ, ಖಜಾನೆ ಪತ್ರಗಳ ಮಾರುಕಟ್ಟೆ ಮುಂತಾದವುಗಳು ಸೇರಿ ಹಣ ಮಾರುಕಟ್ಟೆ)

ಎರಡನೆಯದಾಗಿ ಈ ಮಾರುಕಟ್ಟೆಯಲ್ಲಿ ಭಾಗವಹಿಸುವವರು ತುಂಬಾ ಹೆಚ್ಚಿನ ಸಂಖ್ಯೆಯಲ್ಲಿರುತ್ತಾರೆ. (ಬ್ಯಾಂಕರುಗಳು ಹಾಗೂ ಹಣಕಾಸು ಸಂಸ್ಥೆಗಳು ಭಾಗವಹಿಸುವುವು.)

ಮೂರನೆಯದಾಗಿ ಈ ಮಾರುಕಟ್ಟೆ ಸಗಟು ಮಾರುಕಟ್ಟೆಯಾಗಿರುತ್ತದೆ.

ನಾಲ್ಕನೆಯದಾಗಿ ಸಹಜವಾದ ಮಾರುಕಟ್ಟೆಯಲ್ಲಿ ವ್ಯವಹರಿಸುವಂತೆ ಇಲ್ಲಿ ವ್ಯವಹರಿಸಲಾಗುವುದಿಲ್ಲ.

ಹಣ ಮಾರುಕಟ್ಟೆ ಎಂದೊಡನೆ ನಮಗೆ ನೆನಪಿಗೆ ಬರುವುದು ಲಂಡನ್ನಿನ ಪ್ರಸಿದ್ಧ ಹಣ ಮಾರುಕಟ್ಟೆ.

ಭಾರತೀಯ ಹಣ ಮಾರುಕಟ್ಟೆಯ ಬಗ್ಗೆ ನಾವು ವಿವರವಾಗಿ ತಿಳಿದುಕೊಳ್ಳಲು ಮೊದಲು ಅಭಿವೃದ್ಧಿ ಹೊಂದಿದ ದೇಶದ ಹಣ ಮಾರುಕಟ್ಟೆಯನ್ನು ಹಾಗೂ ಅದರ ಸಂಘಟನೆಯನ್ನು ತಿಳಿದುಕೊಳ್ಳೋಣ : ಲಂಡನ್ ಹಾಗೂ ನ್ಯೂಯಾರ್ಕ್ ಹಣ ಮಾರುಕಟ್ಟೆಗಳು ತುಂಬಾ ಅಭಿವೃದ್ಧಿ ಹೊಂದಿದ ಮಾರುಕಟ್ಟೆಗಳಾಗಿರುತ್ತವೆ. ಈ ಮಾರುಕಟ್ಟೆಗಳು ಅಭಿವೃದ್ಧಿ ಹೊಂದಲು ಕಾರಣಗಳೇನೆಂಬುದನ್ನು ತಿಳಿದುಕೊಳ್ಳೋಣ :

(ಅ) ಹಣಮಾರುಕಟ್ಟೆಯಲ್ಲಿ ಬಂಡವಾಳವನ್ನು ಒದಗಿಸಲು ಬ್ಯಾಂಕುಗಳ ಪಾತ್ರ ತುಂಬಾ ಗಣನೀಯವಾಗಿರುವುದು. ಆದ್ದರಿಂದ ಈ ದೇಶಗಳಲ್ಲಿ ಬ್ಯಾಂಕಿಂಗ್ ವ್ಯವಸ್ಥೆ ತುಂಬಾ ಚೆನ್ನಾಗಿ ಹಾಗೂ ಕ್ರಮಬದ್ಧವಾಗಿದೆ. ಆದರೆ ನಮ್ಮ ದೇಶದಲ್ಲಿ ಇಂತಹ ಕ್ರಮವಾದ ವ್ಯವಸ್ಥೆ ಇಲ್ಲ. ಏನೇ ವ್ಯವಸ್ಥೆಗೊಳಿಸಿದ್ದರೂ ಎಷ್ಟೋ ಖಾಸಗೀ ಬ್ಯಾಂಕರುಗಳು ಕೇಂದ್ರ ಬ್ಯಾಂಕಿನ ನಿಯಂತ್ರಣಕ್ಕೆ ಬರುವುದಿಲ್ಲ.

(ಆ) ಎಲ್ಲಾ ಉಪಮಾರುಕಟ್ಟೆಗಳನ್ನೂ ನಿಯಂತ್ರಿಸಲು ಹಾಗೂ ಅವುಗಳಿಗೆ ಕಾಲಕ್ಕೆ ಸರಿಯಾಗಿ ಸೂಚನೆಯನ್ನು ನೀಡಲು ಕೇಂದ್ರ ಬ್ಯಾಂಕಿನ ವ್ಯವಸ್ಥೆ ಸರಿಯಾಗಿರಬೇಕು. ನಮ್ಮ ದೇಶದಲ್ಲಿ ಕೇಂದ್ರ ಬ್ಯಾಂಕಿನ ವ್ಯವಸ್ಥೆ ಕ್ರಮವಾಗಿಲ್ಲವೆಂಬುದಕ್ಕೆ ಷೇರು ಹಗರಣವೇ ಸಾಕ್ಷಿಯಾಗಿದೆ.

(ಇ) ಸಂಲೇಖಗಳು ಈ ಮಾರುಕಟ್ಟೆಯಲ್ಲಿ ಅನುಕೂಲಕರವಾಗಿ ದೊರೆಕುವಂತೆ ಮಾಡಬೇಕು. ಹುಂಡಿ, ಖಜಾನೆ ಪತ್ರ, ವಾಣಿಜ್ಯ ಪತ್ರ, ಸರ್ಕಾರಿ ಪತ್ರ, ಬಾಂಡ್ ಮುಂತಾದ ಸಂಲೇಖಗಳು ಯಾವ ತೊಂದರೆಯೂ ಇಲ್ಲದಂತೆ ದೊರೆಯುವಂತೆ ಮಾಡಬೇಕು. ಜೊತೆಗೆ ಅವನ್ನು ಕೊಳ್ಳುವ ಸಾಕಷ್ಟು ಸಂಸ್ಥೆಗಳು ಹಾಗೂ ಮಾರುವವರೂ ಇರುವಂತೆ ಮಾರುಕಟ್ಟೆಯಲ್ಲಿ ಕಲ್ಪಿಸಬೇಕು. ನಮ್ಮ ದೇಶದ ಹಣಮಾರುಕಟ್ಟೆ ಅಭಿವೃದ್ಧಿ ಹೊಂದದೆ ಇರುವುದಕ್ಕೆ ಇದೂ ಒಂದು ಮುಖ್ಯ ಕಾರಣ. ಆದ್ದರಿಂದ ವಾಣಿಜ್ಯ ಪತ್ರಗಳು, ಠೇವಣಿ ಪತ್ರಗಳು, 182 ದಿನಗಳ ಖಜಾನೆ ಪತ್ರಗಳು ಮುಂತಾದ ಸಂಲೇಖಗಳನ್ನು ಭಾರತೀಯ ಹಣಮಾರುಕಟ್ಟೆಗೆ ಬಿಡುಗಡೆ ಮಾಡಲಾಗಿದೆ.

(ಈ) ಹಣಮಾರುಕಟ್ಟೆಯ ಅಭಿವೃದ್ಧಿಗೆ ಎಲ್ಲಾ ಉಪಮಾರು

ಕಟ್ಟೆಗಳ ಅಸ್ತಿತ್ವ ಆವಶ್ಯಕವಾದುದು. ಒಂದೊಂದು ಉಪ ಮಾರುಕಟ್ಟೆಯೂ ಒಂದೊಂದು ಸಂಲೇಖದಲ್ಲಿ ವೈಶಿಷ್ಟ್ಯವನ್ನು ಪಡೆದಿರಬೇಕು ಹಾಗೂ ಅವುಗಳನ್ನು ಕೊಳ್ಳಲು ಹೆಚ್ಚಿನ ಸಂಖ್ಯೆಯಲ್ಲಿ ಭಾಗವಹಿಸುವವರು ಇರಬೇಕು. ಈ ಎಲ್ಲಾ ಉಪಮಾರುಕಟ್ಟೆಗಳ ಸಮ್ಮಿಲನ ಹಾಗೂ ಅವುಗಳ ಅಭಿವೃದ್ಧಿ ಹಣ ಮಾರುಕಟ್ಟೆಯ ಅಭಿವೃದ್ಧಿಯಾಗಿರುತ್ತದೆ. ಎಲ್ಲಾ ಉಪಮಾರುಕಟ್ಟೆಗಳು ಒಂದಕ್ಕೊಂದು ಸಂಬಂಧವಿರುವಂತೆ ಕಾರ್ಯ ನಿರ್ವಹಿಸಬೇಕು. ಆದರೆ ನಮ್ಮ ದೇಶದಲ್ಲಿ ಉಪಮಾರುಕಟ್ಟೆಗಳು ಒಂದಕ್ಕೊಂದು ಸಂಬಂಧವಿಲ್ಲದಂತೆ ಕಾರ್ಯ ನಿರ್ವಹಿಸುತ್ತವೆ.

(ಉ) ಸಾಕಷ್ಟು ಹಣ ಈ ಮಾರುಕಟ್ಟೆಯಲ್ಲಿ ದೊರಕುವಂತಾಗಬೇಕು. ಉದಾಹರಣೆಗೆ ಲಂಡನ್ನಿನ ಹಣಮಾರುಕಟ್ಟೆಯು ವಿದೇಶೀ ಹಣವನ್ನೂ ಸಹ ಆಕರ್ಷಿಸುತ್ತದೆ. ಹಾಗೆಯೇ ಹಣ ಮಾರುಕಟ್ಟೆಯ ಸಂಲೇಖಗಳು ಸ್ವದೇಶೀ ಹಾಗು ವಿದೇಶೀ ಹಣವನ್ನು ಆಕರ್ಷಿಸುವಂತಾಗಬೇಕು.

ಕೆಲವು ಇತರ ಲಕ್ಷಣಗಳೆಂದರೆ ಹೆಚ್ಚಿನ ಅಂತರರಾಷ್ಟ್ರೀಯ ವ್ಯಾಪಾರದಿಂದ ಹುಂಡಿಗಳು ಉದ್ಭವವಾಗಿ ಹಣಮಾರುಕಟ್ಟೆಯ ವಹಿವಾಟಿಗೆ ಅನುಕೂಲವಾಗುತ್ತದೆ. ಹೆಚ್ಚಿನ ಕೈಗಾರಿಕೀಕರಣದಿಂದ ಷೇರು ಮಾರುಕಟ್ಟೆಗೆ ಅನುಕೂಲವಾಗುತ್ತದೆ. ಇದರ ಜೊತೆಗೆ ರಾಷ್ಟ್ರದಲ್ಲಿ ರಾಜಕೀಯ ಸ್ಥಿರತೆ ಇದ್ದಲ್ಲಿ ಇದೂ ಸಹ ಅನುಕೂಲಕರವಾಗಿ ಪರಿಣಮಿಸುತ್ತದೆ. ಆದರೆ ನಮ್ಮ ದೇಶದಲ್ಲಿ ರಾಜಕೀಯ ಸ್ಥಿತಿ ಯಾವಾಗಲೂ ಅಲುಗಾಡುತ್ತಿರುತ್ತದೆ. ಇದರಿಂದ ಆರ್ಥಿಕ ವ್ಯವಸ್ಥೆಗೆ ತೊಂದರೆಯುಂಟಾಗಿ ಮಾರುಕಟ್ಟೆಯ ಅಭಿವೃದ್ಧಿ ಕುಂಠಿತಗೊಳ್ಳುತ್ತದೆ.

### ವಾಘುಲ್ ಸಮಿತಿ

ಮೇಲೆ ಹೇಳಿದ ಎಲ್ಲಾ ಲಕ್ಷಣಗಳನ್ನು ಭಾರತೀಯ ಹಣ ಮಾರುಕಟ್ಟೆಯ ಅಭಿವೃದ್ಧಿಗೆ ಅಳವಡಿಸಲು, ಭಾರತೀಯ ರಿಸರ್ವ್ ಬ್ಯಾಂಕು 1986ರಲ್ಲಿ 'ವಾಘುಲ್ ಸಮಿತಿ'ಯನ್ನು ನೇಮಿಸಿತು. ಈ ಸಮಿತಿಯು ಜನವರಿ 1987ರಲ್ಲಿ ತನ್ನ ವರದಿಯನ್ನು ಸಲ್ಲಿಸಿತು, ಈ ಸಮಿತಿಯ ನಾಲ್ಕು ಮುಖ್ಯ ಶಿಫಾರಸುಗಳು ಇವು.

i ಹಣದ ಮಾರುಕಟ್ಟೆಯನ್ನು ಇನ್ನೂ ವಿಸ್ತಾರವಾಗಿ ಮಾಡಲು ಪ್ರಯತ್ನಿಸಬೇಕು ಹಾಗೂ ಇದರಲ್ಲಿ ಭಾಗವಹಿಸುವ ಸಂಸ್ಥೆಗಳನ್ನು ಆರಿಸಿ, ಹೆಚ್ಚಿನ ಸಂಖ್ಯೆಯಲ್ಲಿ ಭಾಗವಹಿಸುವಂತೆ ಮಾಡಬೇಕು.

ii ಈಗಿರುವ ಸಂಲೇಖಗಳನ್ನು ಇನ್ನೂ ಚುರುಕುಗೊಳಿಸಬೇಕು ಹಾಗೂ ಇದರ ಜೊತೆಗೆ ಇನ್ನೂ ಹೊಸ ಸಂಲೇಖಗಳನ್ನು ಈ ಮಾರುಕಟ್ಟೆಯಲ್ಲಿ ಜಾರಿಗೊಳಿಸಬೇಕು ಮತ್ತು ಇದರ ಅಭಿವೃದ್ಧಿ ಕಾರ್ಯಗಳನ್ನು ನಿರ್ವಹಿಸಬೇಕು. ಈ ಹೊಸ ಸಂಲೇಖಗಳು ಮಾರುಕಟ್ಟೆಯಲ್ಲಿ ಭಾಗವಹಿಸುವ ಸಂಸ್ಥೆಗಳಿಗೆ ಹೊಂದುವಂತೆ ಇರಬೇಕು.

iii ರಚನಾತ್ಮಕ ಎರಡನೆಯ ಮಾರುಕಟ್ಟೆಯ ಆವಶ್ಯಕತೆ ಇದ್ದಲ್ಲಿ ಹೊಸ ಸಂಸ್ಥೆಗಳನ್ನು ಹುಟ್ಟುಹಾಕುವುದು/ಸ್ಥಾಪಿಸುವುದು.

iv ಹಣ ಮಾರುಕಟ್ಟೆಯು ಬಡ್ಡಿದರಗಳ ನಿರ್ವಹಣೆಯಾಗಬೇಕು.

ಈ ಮೇಲ್ಕಂಡ ಶಿಫಾರಸಿನ ಆಧಾರದ ಮೇಲೆ ಭಾರತೀಯ ರಿಸರ್ವ್ ಬ್ಯಾಂಕು, ಭಾರತೀಯ ಹಣಮಾರುಕಟ್ಟೆಯ ಅಭಿವೃದ್ಧಿ ಕಾರ್ಯಕ್ರಮಗಳನ್ನು ರೂಪಿಸಿಕೊಳ್ಳಲಾಯಿತು. ಅವುಗಳು ಈ ರೀತಿ ಇವೆ :

1 ಇರುವ ಸಂಲೇಖಗಳನ್ನು ಚುರುಕುಗೊಳಿಸುವುದು ಹಾಗೂ ಹೊಸ ಸಂಲೇಖಗಳನ್ನು ಜಾರಿಗೊಳಿಸುವುದು. ಉದಾಹರಣೆಗೆ ವಾಣಿಜ್ಯ ಪತ್ರಗಳು, ಠೇವಣಿ ಪತ್ರಗಳು ಹಾಗೂ ಇತರೆ ಸಂಲೇಖಗಳನ್ನು ಜಾರಿಗೊಳಿಸಲಾಗಿದೆ.

2 ಭಾರತೀಯ ವಟ್ಟ ಮತ್ತು ಹಣಕಾಸು ಸಂಸ್ಥೆ ಎಂಬ ಹೊಸ ಸಂಸ್ಥೆಯನ್ನು 1988ರಲ್ಲಿ ಸ್ಥಾಪಿಸಲಾಗಿದೆ. ಹಣ ಮಾರುಕಟ್ಟೆಯ ಸಂಲೇಖಗಳ ದ್ರವತ್ವವನ್ನು ಹೆಚ್ಚಿಸಲಾಗಿದೆ. ಈ ಸಂಸ್ಥೆಯನ್ನು ಎರಡನೆಯ ಸ್ತರದ ಮಾರುಕಟ್ಟೆಯ ಅಭಿವೃದ್ಧಿಗೋಸ್ಕರ ಸ್ಥಾಪಿಸಲಾಗಿದೆ. ಇಲ್ಲಿ ಸಂಲೇಖಗಳನ್ನು ಮರುವಟಾಯಿಸಿ ವಾಣಿಜ್ಯ ಸಂಸ್ಥೆಗಳು ಹಣವನ್ನು ಪಡೆಯುತ್ತವೆ.

### ಸಂಲೇಖಗಳು

ಈಗ ಮಾರುಕಟ್ಟೆಯ ಸಂಲೇಖಗಳ ಬಗ್ಗೆ ಸಂಕ್ಷಿಪ್ತವಾಗಿ ತಿಳಿದುಕೊಳ್ಳೋಣ :

### 1 ಕರೆ ಹಾಗೂ ಸೂಚನೆ ನೀಡುವ ಹಣ ಮಾರುಕಟ್ಟೆ

ಈ ಮಾರುಕಟ್ಟೆಯಲ್ಲಿ ವ್ಯವಹಾರವನ್ನು ಒಂದೇ ದಿವಸಕ್ಕೆ ಸೀಮಿತಗೊಳಿಸಲಾಗಿದೆ. ಆದರೆ ಗರಿಷ್ಠ 14 ದಿನಗಳ ಸೂಚನೆಯ ಮೇರೆಗೆ ಹಣವನ್ನು ಯಾವ ಭದ್ರತೆಯೂ ಇಲ್ಲದೆ ನೀಡಲಾಗುವುದು. ಈ ಮಾರುಕಟ್ಟೆಯಲ್ಲಿ ಸಹಜವಾಗಿ ವಾಣಿಜ್ಯ ಬ್ಯಾಂಕುಗಳು ಭಾಗವಹಿಸುತ್ತವೆ. ಬ್ಯಾಂಕುಗಳು ಪರಿನಿಯತ ದ್ರವತ್ವ ಅನುಪಾತವನ್ನು ಹಾಗೂ ನಗದು ಮೀಸಲು ಅನುಪಾತವನ್ನು ಕಾಯ್ದುಕೊಳ್ಳಲು, ತುರ್ತುಪರಿಸ್ಥಿತಿಯಲ್ಲಿ ಈ ಮಾರುಕಟ್ಟೆಗೆ ಬರುತ್ತವೆ. ಕೆಲವು ವೇಳೆ ಬ್ಯಾಂಕಿನ ಪರಿಸ್ಥಿತಿಯು ಸಂಧಾರಿಸಿದ್ದರೆ, ಹಣವು ಹೆಚ್ಚುವರಿ ಇದ್ದಲ್ಲಿ ಅದನ್ನು ಮಾರುಕಟ್ಟೆಯಲ್ಲಿ ಬಿಡುಗಡೆ ಮಾಡುತ್ತವೆ. ಇತರ ಹಣಕಾಸಿನ ಸಂಸ್ಥೆಗಳು ಹಾಗೂ ಅಖಿಲ ಭಾರತ ಹಣಕಾಸಿನ ಸಂಸ್ಥೆ, ರಿಸರ್ವ್ ಬ್ಯಾಂಕಿನ ಅಪ್ಪಣೆ ಮೇರೆಗೆ ಸಾಲ ನೀಡಿಕೆಗೆ ಮಾತ್ರ ಪ್ರವೇಶವಿದೆ.

### 2 ಅಂತರ ಬ್ಯಾಂಕ್ ಅವಧಿ ಹಣ

ಈ ಮಾರುಕಟ್ಟೆಯಲ್ಲಿ ಸಾಮಾನ್ಯವಾಗಿ 14ರಿಂದ 90 ದಿನಗಳವರೆಗೆ ಸಾಲವನ್ನು ಪಡೆಯಬಹುದು. ಇಲ್ಲಿ ವಾಣಿಜ್ಯ ಬ್ಯಾಂಕುಗಳು ಹಾಗೂ ಸಹಕಾರಿ ಬ್ಯಾಂಕುಗಳು ವ್ಯವಹರಿಸಬಹುದಷ್ಟೆ.

### 3 ಖಜಾನೆ ಹುಂಡಿಗಳು

ಈ ಪತ್ರಗಳನ್ನು ಭಾರತ ಸರ್ಕಾರ ಕಡಿಮೆ ಕಾಲಾವಧಿಗೆ ಸೋಡಿಯ ಮೇಲೆ ನೀಡುವುದು. ಈ ಪತ್ರಗಳನ್ನು 91 ದಿವಸಗಳಿಂದ 364 ದಿವಸಗಳವರೆಗೂ ನೀಡಲಾಗುವುದು. ನವೆಂಬರ್ 1986ರಿಂದ 182 ದಿನಗಳ ಖಜಾನೆ ಪತ್ರಗಳನ್ನು ಬಿಡುಗಡೆ

ಮಾಡಲಾಗಿದೆ. ಈ ಮಾರುಕಟ್ಟೆಯಲ್ಲಿ ಪತ್ರಗಳನ್ನು ಹರಾಜಿನ ಮೂಲಕ ಮಾರಲಾಗುವುದು.

### 4 ಹುಂಡಿಗಳು

ವ್ಯಾಪಾರ ಹುಂಡಿಗಳನ್ನು, ಬ್ಯಾಂಕಿನಲ್ಲಿ ಹಣಪಡೆಯಲು ವಟಾಯಿಸಿದಾಗ ಅವು ವಾಣಿಜ್ಯ ಹುಂಡಿಗಳಾಗುತ್ತವೆ. ಸಾಮಾನ್ಯವಾಗಿ ವಸ್ತು ಮಾರುವವನು (ರಫ್ತುದಾರನು) ಕೊಂಡುಕೊಳ್ಳುವವನ ಮೇಲೆ ಬರೆಯುವ ಸಂಲೇಖವನ್ನು ಹುಂಡಿ ಎನ್ನುತ್ತಾರೆ.

### 5 ಠೇವಣಿ ಪತ್ರಗಳು

1989ರಿಂದ ಠೇವಣಿ ಪತ್ರಗಳನ್ನು ವಾಣಿಜ್ಯ ಬ್ಯಾಂಕುಗಳು ಬಿಡುಗಡೆ ಮಾಡಲು ಅನುಮತಿ ನೀಡಲಾಗಿದೆ. ಸಾಮಾನ್ಯವಾಗಿ ಠೇವಣಿಗಳನ್ನು ಸಂಗ್ರಹಿಸಲು ದೊಡ್ಡ ದೊಡ್ಡ ಕಂಪನಿಗಳು ಹಾಗೂ ಸರ್ಕಾರಿ ಸಂಸ್ಥೆಗಳಿಗೆ ಈ ಪತ್ರಗಳನ್ನು ಸ್ಪರ್ಧಾತ್ಮಕ ಬಡ್ಡಿ ದರದ ಮೇಲೆ ನೀಡಲಾಗುವುದು. ಒಂದು ಠೇವಣಿ ಪತ್ರವನ್ನು ಕನಿಷ್ಠ ರೂ. 25 ಲಕ್ಷಕ್ಕೆ ನೀಡಲಾಗುವುದು. ಇದರ ಕಾಲಮಿತಿ 3 ತಿಂಗಳಿಂದ ಒಂದು ವರ್ಷವೆಂದು ಹೇಳಬಹುದು.

### 6 ವಾಣಿಜ್ಯ ಪತ್ರಗಳು

ಆರ್ಥಿಕವಾಗಿ ಸುಸ್ಥಿತಿಯಲ್ಲಿರುವ ಕಂಪನಿಗಳು, ಕೆಲವು ಒಳ್ಳೆಯ ಸಂಸ್ಥೆಗಳು ಬ್ಯಾಂಕುಗಳಿಂದ ಬಂಡವಾಳವನ್ನು ಪಡೆಯುವ ಬದಲು ನೇರವಾಗಿ ತಾವು ಠೇವಣಿಗಳನ್ನು ಸಂಗ್ರಹಿಸಿ ಈ ವಾಣಿಜ್ಯ ಪತ್ರಗಳನ್ನು ನೀಡುತ್ತವೆ. ಈ ಪತ್ರಗಳನ್ನು ಬಿಡುಗಡೆ ಮಾಡುವ ಸಂಸ್ಥೆಗಳ ಬಂಡವಾಳ ಐದು ಕೋಟಿಗೆ ಕಡಿಮೆ ಇರಬಾರದು. ಇದನ್ನು 3ರಿಂದ 6 ತಿಂಗಳ ಅವಧಿಗೆ ನೀಡಲಾಗುವುದು. ಇದರ ಕನಿಷ್ಠ ಮೊತ್ತ ರೂ. 25 ಲಕ್ಷವಾಗಿರಬೇಕು.

### ಹಣ ಮಾರುಕಟ್ಟೆಯ ಅನುಕೂಲಗಳು

ಯಾವುದೇ ಒಂದು ವಾಣಿಜ್ಯ ಬ್ಯಾಂಕನ್ನು ತೆಗೆದುಕೊಂಡರೆ, ಅದರ ಮೂಲ ಉದ್ದೇಶಗಳು ಈ ಕೆಳಕಂಡಂತಿರುತ್ತವೆ :

ಮೊದಲನೆಯದಾಗಿ ತನ್ನ ಬ್ಯಾಂಕಿಂಗ್ ವ್ಯವಹಾರದಲ್ಲಿ ಹಣ ಹೂಡಿಕೆಗೆ ಅದು ಭದ್ರತೆಯನ್ನು ನಿರೀಕ್ಷಿಸುತ್ತದೆ :

ಎರಡನೆಯದಾಗಿ ಬ್ಯಾಂಕು ಹಣ ಹೂಡಿದರೆ ಅದು ಲಾಭದಾಯಕವಾಗಿರಬೇಕು. ಏಕೆಂದರೆ ಬ್ಯಾಂಕು ತನ್ನ ಠೇವಣಿದಾರರಿಗೆ ಬಡ್ಡಿಯನ್ನು ವಿತರಿಸಬೇಕು ಹಾಗೂ ತನ್ನ ಸಿಬ್ಬಂದಿಯ ಖರ್ಚುವೆಚ್ಚ ನಿರ್ವಹಿಸಬೇಕು. ಇದಾದ ನಂತರವೂ ತನ್ನ ಷೇರುದಾರರಿಗೆ ಡಿವಿಡೆಂಡನ್ನು ಹಂಚಬೇಕು. ಇದು ಮೂಲತಃ ವಾಣಿಜ್ಯ ಬ್ಯಾಂಕಾದ್ದರಿಂದ ಲಾಭಗಳಿಕೆ ಒಂದು ಮುಖ್ಯ ಉದ್ದೇಶ.

ಮೂರನೆಯದಾಗಿ ತನ್ನ ಹಣವು ಬೇಕೆಂದಾಗ ಅತಿ ಕಡಿಮೆ ವೆಚ್ಚದಲ್ಲಿ ಹಿಂದೆ ಪಡೆಯಬೇಕು.

ಈ ಮೇಲೆ ಹೇಳಿದ ಮೂರು ಉದ್ದೇಶಗಳನ್ನು ಪೂರೈಸಲು ಬ್ಯಾಂಕರುಗಳಿಗೆ ಹಣ ಮಾರುಕಟ್ಟೆ ತುಂಬಾ ಉಪಯುಕ್ತವಾಗಿದೆ.

ಬ್ಯಾಂಕುಗಳು ಹಣದ ಆವಶ್ಯಕತೆ ಇದ್ದಲ್ಲಿ ಅಲ್ಪಾವಧಿಗೆ ಈ ಮಾರುಕಟ್ಟೆಯ ಸದುಪಯೋಗ ಪಡೆದುಕೊಳ್ಳಬಹುದು. ತನ್ನಲ್ಲಿರುವ ಸಂಲೇಖಗಳನ್ನು ಈ ಮಾರುಕಟ್ಟೆಯಲ್ಲಿ ಪುನಃ ವಟಾಯಿಸಬಹುದು.

ಈ ಮಾರುಕಟ್ಟೆ ಬ್ಯಾಂಕರುಗಳಿಗೆ ಮಾತ್ರವಲ್ಲದೆ, ದೇಶದ ಪ್ರಗತಿಗೆ ಮತ್ತು ಆರ್ಥಿಕ ಸ್ಥಿರತೆಗೆ ತುಂಬಾ ಉಪಯುಕ್ತವಾಗಿದೆ. ಈ ಮಾರುಕಟ್ಟೆಯ ವಿವಿಧ ಸಂಲೇಖಗಳಿಂದ ಕೈಗಾರೀಕರಣಕ್ಕೆ ಉತ್ತೇಜನ ಕೊಟ್ಟಂತಾಗಿ, ವಸ್ತುಗಳ ಉತ್ಪಾದನೆಗೆ ಸಹಾಯಕವಾಗಿ ಭಾರತವು ಅಂತರರಾಷ್ಟ್ರೀಯ ಮಾರುಕಟ್ಟೆಯಲ್ಲಿ ಸ್ಪರ್ಧಿಸಲು ತುಂಬಾ ಅನುಕೂಲವಾಗುತ್ತದೆ. ●







**ಚಂದಾದಾರರಲ್ಲಿ**

ನಿಮ್ಮ ವಿಳಾಸದಲ್ಲಿ ಬದಲಾವಣೆಯಾದಾಗ ದಯವಿಟ್ಟು ನಿಮ್ಮ ಹೊಸ ವಿಳಾಸವನ್ನು ನಮಗೆ ತಿಳಿಸಿ.

**ಸಮನ್ವಯ ಸಮಿತಿ**

ಭಾರತೀಯ ಸ್ಟೇಟ್ ಬ್ಯಾಂಕ್ ಕನ್ನಡ ಸಂಘಗಳು
೨೨ ಜಯಚಾಮರಾಜೇಂದ್ರ ರಸ್ತೆ
ಬೆಂಗಳೂರು ೫೬೦ ೦೦೨



# ಇಪ್ಪತ್ತೊಂದನೆಯ ಶತಮಾನದ ಬ್ಯಾಂಕಿಂಗ್: ಸವಾಲುಗಳು

ಎಸ್. ಕೆ. ದೇವರ ಹುಬ್ಬಳ್ಳಿ

**ಭಾರತದ ಅರ್ಥವ್ಯವಸ್ಥೆಯಲ್ಲಿ ಮಾಡಲಾಗುತ್ತಿರುವ ಬದಲಾವಣೆಗಳಿಂದಾಗಿ ಹಣಕಾಸು ವ್ಯವಸ್ಥೆ, ಮುಖ್ಯವಾಗಿ ಬ್ಯಾಂಕಿಂಗ್ ವ್ಯವಸ್ಥೆ, ಅಭೂತಪೂರ್ವ ಸವಾಲುಗಳನ್ನು ಎದುರಿಸಲು ಸಜ್ಜಾಗಿದೆ. ಅವುಗಳೊಂದಿಗೇ ಮಹಾ ಅವಕಾಶಗಳನ್ನೂ ಅದು ಪಡೆಯಲಿದೆ.**

ಭಾರತದ ಅರ್ಥವ್ಯವಸ್ಥೆ ಈಗ ಪರ್ವಕಾಲದಲ್ಲಿದೆ ಮತ್ತು ತೀವ್ರವಾದ ಪರಿವರ್ತನೆಯನ್ನು ಅನುಭವಿಸುತ್ತಿದೆ. ಸುಮಾರು ಎರಡು ವರ್ಷಗಳ ಹಿಂದೆ ಪ್ರಾರಂಭಿಸಲಾದ ಸ್ಥಿರತೆ ಮತ್ತು ಮೂಲಭೂತ ಸುಧಾರಣೆಗಳ ಕಾರ್ಯಕ್ರಮದಿಂದಾಗಿ ಮಾರುಕಟ್ಟೆ ಸ್ಥಿತಿಯು ಶೀಘ್ರಗತಿಯಲ್ಲಿ ಸ್ಪರ್ಧಾತ್ಮಕವಾಗುತ್ತಿದೆ, ವಿಶ್ವವ್ಯಾಪೀಕರಣವಾಗುತ್ತಿದೆ. ಕೈಗಾರಿಕಾ ನೀತಿಯು ದೇಶೀಯವಾಗಿ ಸ್ಪರ್ಧಾತ್ಮಕ ವಾತಾವರಣ ತರಲು ಬಯಸಿದರೆ, ವ್ಯಾಪಾರ ನೀತಿಯು ಅಂತಾರಾಷ್ಟ್ರೀಯ ಸ್ಪರ್ಧಾತ್ಮಕತೆಯನ್ನು ತರಲು ಪ್ರಯತ್ನಿಸಿದೆ. ಖಾಸಗಿ ಕ್ಷೇತ್ರದ ಕಾರ್ಯಾಚರಣೆಗೆ ಹೆಚ್ಚಿನ ಅನುಕೂಲತೆಯನ್ನು ಒದಗಿಸಲಾಗುತ್ತಿದೆ. ಏಕೆಂದರೆ ಸಾರ್ವಜನಿಕ ಕ್ಷೇತ್ರದ ಮಾತ್ರ ಮೀಸಲಾಗಿಟ್ಟಿದ್ದ ಕೆಲವೊಂದು ಕೈಗಾರಿಕೆಗಳನ್ನು ಈಗ ಖಾಸಗಿ ಕ್ಷೇತ್ರಕ್ಕೆ ಕೂಡ ತೆರೆಯಲಾಗುತ್ತಿದೆ. ಸಾರ್ವಜನಿಕ ಕ್ಷೇತ್ರಕ್ಕೆ ಪ್ರಭಾವಶಾಲಿ ಸ್ಥಾನ ಮುಂದುವರಿದರೂ ಕೂಡ ಅದು ಖಾಸಗಿ ಕ್ಷೇತ್ರದ ಜೊತೆ ಸ್ಪರ್ಧಿಗಿಳಿಯಬೇಕಾಗುತ್ತದೆ.

ಖಾಸಗಿ ಅಥವಾ ಸಾರ್ವಜನಿಕ ಕ್ಷೇತ್ರದ ವಿವಿಧ ಸಂಸ್ಥೆಗಳಲ್ಲಿ ಸ್ಪರ್ಧಾತ್ಮಕ ಅಂಶವನ್ನು ಬೆರೆಸಿ, ಅವುಗಳ ಕಾರ್ಯಾಚರಣೆಯಲ್ಲಿ ಸುಧಾರಣೆಯನ್ನು ತರುವುದೇ ಇವೆಲ್ಲದರ ಗುರಿ ಎಂದು ಹೇಳಬಹುದು.

## ಬ್ಯಾಂಕಿಂಗ್ ಕ್ಷೇತ್ರದ ಸುಧಾರಣೆಗಳು

ಭಾರತದ ಅರ್ಥವ್ಯವಸ್ಥೆಯು ವಾಸ್ತವಿಕ ಕ್ಷೇತ್ರಗಳ ಈ ಬದಲಾವಣೆಗಳಿಂದ ಈಗ ಹಣಕಾಸಿನ ವ್ಯವಸ್ಥೆ, ಪ್ರಮುಖವಾಗಿ ಬ್ಯಾಂಕಿಂಗ್ ವ್ಯವಸ್ಥೆ, ಅಭೂತಪೂರ್ವ ಸವಾಲುಗಳು ಮತ್ತು ಸದವಕಾಶಗಳನ್ನೆದುರಿಸಲು ಸಜ್ಜಾಗಿದೆ.

ಆಗಸ್ಟ್ 1991ರಲ್ಲಿ ಕೇಂದ್ರ ಸರಕಾರ, ಭಾರತೀಯ ರಿಸರ್ವ್ ಬ್ಯಾಂಕಿನ ಹಿಂದಿನ ಗವರ್ನರ್ ಶ್ರೀ ಎಂ. ನರಸಿಂಹಂ ಅವರ ಅಧ್ಯಕ್ಷತೆಯಲ್ಲಿ ಉನ್ನತಾಧಿಕಾರವುಳ್ಳ ಒಂದು ಸಮಿತಿಯನ್ನು ರಚಿಸಿತು. ಹಣಕಾಸು ವ್ಯವಸ್ಥೆಯ ಸ್ವರೂಪ, ಸಂರಚನೆ, ಕಾರ್ಯ ಮತ್ತು ನಡವಳಿಕೆಗಳಿಗೆ ಸಂಬಂಧಪಟ್ಟ ಎಲ್ಲ ಅಂಶಗಳನ್ನು ಪರಿಶೀಲಿಸಿ ಹಣಕಾಸು ಕ್ಷೇತ್ರದ ಸುಧಾರಣೆಗಳನ್ನು ಪ್ರಾರಂಭಿಸುವುದೇ ಈ ಸಮಿತಿಯ ಕರ್ತವ್ಯವಾಗಿತ್ತು. ಈ ಸಮಿತಿಯು ತನ್ನ ಶಿಫಾರಸುಗಳನ್ನು ನವೆಂಬರ್ 16, 1991ರಂದು ಸರ್ಕಾರಕ್ಕೆ ಸಲ್ಲಿಸಿತು. ಏಕರೂಪದ ಲೆಕ್ಕಗಾರಿಕೆಯ ಧೋರಣೆಗಳು ಮತ್ತು ಬ್ಯಾಂಕುಗಳ ಉತ್ತಮ ಬಂಡವಾಳೀಕರಣವೇ ಈ ಶಿಫಾರಸುಗಳ ಮೂಲ ತತ್ವ ಆಗಿತ್ತು. ಎಲ್ಲ ಬ್ಯಾಂಕುಗಳ ಸ್ವತ್ತುಗಳನ್ನು (ಮುಖ್ಯವಾಗಿ ಸಾಲಗಳು) ಅತ್ಯುತ್ತಮ ದರ್ಜೆಯ, ಸಾಧಾರಣ ದರ್ಜೆಯ, ಸಂದೇಹಾಸ್ಪದ ಮತ್ತು ನಷ್ಟದ ಸ್ವತ್ತುಗಳೆಂದು ನಾಲ್ಕು ವಿಧಗಳಾಗಿ ವಿಂಗಡಿಸಲು ಸೂಚಿಸಲಾಯಿತು. ಕೊನೆಯ ಮೂರು ವಿಧದ ಸ್ವತ್ತುಗಳಿಗೆ ಸೂಕ್ತವಾದ ಮುನ್ನೇರ್ಪಾಟುಗಳನ್ನು ಮಾಡಲು ಹೇಳಲಾಯಿತು. ಬ್ಯಾಂಕುಗಳ ಪಾವತಿಸಿದ ಬಂಡವಾಳ ಮತ್ತು ಮೀಸಲುಗಳನ್ನು ಹೆಚ್ಚಿಸಿ, ಅವು ಬ್ಯಾಂಕಿನ ಸ್ವತ್ತುಗಳಾದ ಹಣಹೂಡಿಕೆಗಳು, ಸಾಲಗಳು ಮತ್ತು ಮುಂಗಡಗಳಿಗೆ ಸೂಕ್ತವಾದ ಪ್ರಮಾಣದಲ್ಲಿರುವಂತೆ ಶಿಫಾರಸು ಮಾಡಲಾಯಿತು. ಸಮಿತಿಯ ಇನ್ನುಳಿದ ಶಿಫಾರಸುಗಳು ಇಂತಿವೆ :

1 ಶಾಸನ ವಿಧಿಸಿದ ದ್ರವತ್ವ ಅನುಪಾತ (ಎಸ್.ಎಲ್.ಆರ್.) ಹಾಗೂ ನಗದು ಮೀಸಲು ಅನುಪಾತ(ಸಿ.ಆರ್.ಆರ್.)ಗಳನ್ನು ಅನುಕ್ರಮವಾಗಿ ಶೇಕಡ 25 ಹಾಗೂ ಶೇಕಡ 10ಕ್ಕೆ ಇಳಿಸಿ ಅವುಗಳಿಗೆ ನೀಡುವ ಬಡ್ಡಿಯಲ್ಲಿ ಹೆಚ್ಚಳ.

2 ಆದ್ಯತಾವಲಯಕ್ಕೆ ಪುನಃ ವ್ಯಾಖ್ಯೆ ನೀಡಿ ಅದಕ್ಕೆ ನೀಡುವ ಸಾಲದ ಪ್ರಮಾಣವನ್ನು ಶೇಕಡಾ 40ರಿಂದ ಶೇಕಡಾ 10ಕ್ಕೆ ತರುವುದು.

3 ಆದಾಯ ಪರಿಶೀಲನೆ ಮತ್ತು ಸೊತ್ತುಗಳ ವಿಂಗಡಣೆಗೆ ಹೊಸ ವಿವೇಕಯುಕ್ತ ನೀತಿಗಳನ್ನು ಅನುಸರಿಸುವುದು ಮತ್ತು ವಸೂಲಾಗದ ಸಾಲಗಳಿಗೆ ಹಣವನ್ನು ಕಾದಿರಿಸುವುದು.

4 ಸಾಲ ವಸೂಲಾತಿಗೆ ವಿಶೇಷ ನ್ಯಾಯಾಲಯಗಳ ಸ್ಥಾಪನೆ.

5 ಬ್ಯಾಂಕುಗಳಿಗೆ ಹೊಸ ಶಾಖೆಗಳನ್ನು ತೆರೆಯಲು ಅನುಮತಿ ಮತ್ತು ಇತರ ಬ್ಯಾಂಕುಗಳ ಶಾಖೆಗಳನ್ನು ಸಮನ್ವಯಿಸಲು ಸ್ವಾತಂತ್ರ್ಯ.

6 ಗಣಕೀಕರಣದ ಹೆಚ್ಚಿನ ಬಳಕೆಗೆ ಒತ್ತು ನೀಡುವುದು.

7 ರಿಸರ್ವ್ ಬ್ಯಾಂಕಿನ ಆಶ್ರಯದಲ್ಲಿ ಬ್ಯಾಂಕಿಂಗ್ ಮೇಲ್ವಿಚಾರಣಾ ಮಂಡಳಿ ಸ್ಥಾಪಿಸಲು ಸಲಹೆ.

ಸರಕಾರ ನರಸಿಂಹಂ ಸಮಿತಿಯ ವರದಿಯನ್ನು ಅಂಗೀಕರಿಸಿ ಅದನ್ನು ಅನುಷ್ಠಾನಗೊಳಿಸುವ ಹೊಣೆಯನ್ನು ರಿಸರ್ವ್ ಬ್ಯಾಂಕಿಗೆ ಒಪ್ಪಿಸಿತು.

## ಹೊಸ ನಿಯಮಗಳ ಅನುಷ್ಠಾನ

ಹೊಸ ನೀತಿಯನ್ವಯ ಬ್ಯಾಂಕುಗಳಿಗೆ ಅವುಗಳ ಕಾರ್ಯಾಚರಣೆಯಲ್ಲಿ ಪೂರ್ಣ ಜವಾಬ್ದಾರಿ ನೀಡುವ ಜೊತೆಗೆ ಅವುಗಳನ್ನು ಸ್ವಾಯತ್ತ ವಾಣಿಜ್ಯೋದ್ಯಮ ಸಂಸ್ಥೆಗಳನ್ನಾಗಿ ಮಾರ್ಪಡಿಸಲು ಉದ್ದೇಸಿಸಲಾಗಿದೆ. ಹೀಗೆ ಬ್ಯಾಂಕಿಂಗ್ ಕ್ಷೇತ್ರದಲ್ಲಿ ಮೂಲಭೂತ ಮಾರ್ಪಾಟುಗಳನ್ನು ಮಾಡುವಾಗ ಇಷ್ಟು ದಿನಗಳವರೆಗೆ ಬ್ಯಾಂಕುಗಳಿಗೆ ಇರುತ್ತಿದ್ದ ಬಾಹ್ಯ ಅಡೆ-ತಡೆಗಳನ್ನು ನಿವಾರಿಸಬೇಕಾಗುತ್ತದೆ. ಈ ನಿಟ್ಟಿನಲ್ಲಿ ಯಥೋಚಿತ ಬಂಡವಾಳ ಹಾಗೂ ಸಾಲ ನಷ್ಟಗಳ ಮುನ್ನೇರ್ಪಾಟಿಗೆ ಸಂಬಂಧಿಸಿದ ಸೂಕ್ತವಾದ ವ್ಯವಹಾರ ಕುಶಲ ಮಾಪನಗಳನ್ನು ವಿಧಿಸಲಾಗುತ್ತಿದೆ. ಲೆಖ್ಖ ಬರೆಹ ಹಾಗೂ ವರದಿ ನೀಡುವ ನಡವಳಿಕೆಗಳಲ್ಲಿ ಪಾರದರ್ಶಕತೆಯನ್ನು ಬಳಕೆಗೆ ತರಲಾಗುತ್ತಿದೆ. ಬ್ಯಾಂಕುಗಳ ಪುನರ್ಘಟನೆಯನ್ನು ಮಾಡಲಾಗುತ್ತಿದೆ. ಅಲ್ಲದೆ ಮಾರುಕಟ್ಟೆಯ ಸ್ಪರ್ಧಾತ್ಮಕ ಲಕ್ಷಣವನ್ನು ಖಾಸಗಿಯವರ ಪ್ರವೇಶದ ಮೂಲಕ ಅಭಿವೃದ್ಧಿಗೊಳಿಸಲಾಗುತ್ತಿದೆ. ಈ ಪ್ರಕ್ರಿಯೆ ಅಧಿಕಾಂಶದ ರಾಷ್ಟ್ರೀಕೃತ ಬ್ಯಾಂಕುಗಳಿಗೆ ಬಹಳ ಯಾತನೆದಾಯಕವಾಗಲಿದೆ. ಏಕೆಂದರೆ ತಮ್ಮ ಅಂಗಳವನ್ನು ಸ್ವಚ್ಛಗೊಳಿಸಿ ಹೊಸ ಪರಿಸರಕ್ಕೆ ಹೊಂದಿಕೊಳ್ಳಲು ಅವುಗಳಿಗೆ ಬಹಳ ಸಮಯವೇ ಬೇಕಾಗುವುದು. ಯಥೋಚಿತ ಬಂಡವಾಳವನ್ನು ನಿರ್ಧರಿಸಲು ನಷ್ಟ-ಸಂಭವ ಸ್ವತ್ತುಗಳ ಬೆಲೆಕಟ್ಟುವ ವ್ಯವಸ್ಥೆ, ಆದಾಯ ಗುರುತಿಸುವಿಕೆ ಮತ್ತು ಮುನ್ನೇರ್ಪಾಟಿಗೆ ಹೊಸ ನಿಯಮಗಳನ್ನು ಮಂಡಿಸಲಾಗಿದೆ. ಎಲ್ಲ ಬ್ಯಾಂಕುಗಳು ತಮ್ಮ ನಷ್ಟ-ಸಂಭವ ಸ್ವತ್ತುಗಳ ಪ್ರತಿಶತ ಎಂಟರಷ್ಟು ಮೂಲ ಬಂಡವಾಳವನ್ನು ಮಾರ್ಚ್ 31, 1996ರ ವರೆಗೆ ಸಾಧಿಸಲು ತಿಳಿಸಲಾಗಿದೆ. ಈ ಹೊಸ ನಿಯಮಗಳ ಅನುಷ್ಠಾನದಿಂದ ಈ ಹಿಂದೆ ಭಾರತೀಯ ಬ್ಯಾಂಕುಗಳು ಅನುಸರಿಸುತ್ತಿದ್ದ ಲೆಕ್ಕಬರಹ ವಿಧಾನಗಳಲ್ಲಿಯ ಲೋಪ-ದೋಷಗಳು ಬೆಳಕಿಗೆ ಬಂದಿವೆ. ಮಾರ್ಚ್ 31, 1993ಕ್ಕೆ ಕೊನೆಗೊಂಡ ವರ್ಷದಲ್ಲಿ ಇಪ್ಪತ್ತು ರಾಷ್ಟ್ರೀಕೃತ ಬ್ಯಾಂಕುಗಳು ಒಟ್ಟಾಗಿ 797 ಕೋಟಿ ರೂಪಾಯಿಗಳ ಸಾಧಾರಣ ರೀತಿಯ ಪರಿಚಾಲನ ಲಾಭವನ್ನು ತೋರಿಸಿವೆ. ಅಗಾಧ ಪ್ರಮಾಣದ ಮುನ್ನೇರ್ಪಾಟುಗಳು ಮತ್ತು ಸಂಭವನೀಯತೆಗಳಿಗೆ ತೆಗೆದಿರಿಸಿದ 4,444 ಕೋಟಿ ರೂಪಾಯಿಗಳನ್ನು ಸೇರಿಸಿದರೆ, ಅವು 3,647 ಕೋಟಿ ರೂಪಾಯಿಗಳ ಭಾರಿ ಪ್ರಮಾಣದ ನಿವ್ವಳ ನಷ್ಟವನ್ನು ವರದಿಮಾಡಿವೆ. ಕೇವಲ ಏಳು ಬ್ಯಾಂಕುಗಳು ಒಟ್ಟಾಗಿ 115 ಕೋಟಿ ರೂಪಾಯಿಗಳ ನಿವ್ವಳ ಲಾಭವನ್ನು ತೋರಿಸಿವೆ.

## ಪ್ರಮುಖ ಆತಂಕ : ನಿಷ್ಕ್ರಿಯ ಸ್ವತ್ತುಗಳು

ಬಹು ವರ್ಷಗಳಿಂದ ಭಾರತೀಯ ಬ್ಯಾಂಕುಗಳಲ್ಲಿಯ ಒಂದು ಲಕ್ಷಣವೇನೆಂದರೆ ಅತಿ ಕಡಿಮೆ ಮಟ್ಟದ ಲಾಭದ ಪ್ರಮಾಣ. ಪರಿಣಾಮವಾಗಿ ಬ್ಯಾಂಕುಗಳು ಮೀಸಲನ್ನು ಅತಿ ಕಡಿಮೆ ಮಟ್ಟದಲ್ಲಿ ಶೇಖರಿಸಿವೆ.

ನಿಷ್ಕ್ರಿಯ ಸ್ವತ್ತುಗಳು ಭಾರತೀಯ ಬ್ಯಾಂಕುಗಳ ಲಾಭದ ಪ್ರಮಾಣದ ಮೇಲೆ ಪರಿಣಾಮ ಬೀರುವ ಪ್ರಮುಖ ಅಂಶವಾಗಿ ಮಾರ್ಪಟ್ಟಿವೆ. ಈ ಹಿಂದೆ ಬಹಳಷ್ಟು ಬ್ಯಾಂಕುಗಳು ನಿಷ್ಕ್ರಿಯ ಸ್ವತ್ತುಗಳ ಮೇಲೆ ಕೂಡ, ಲಭಿಸುವ ಆಧಾರದ ಮೇಲೆ, ಆದಾಯವನ್ನು ಪರಿಗಣಿಸುತ್ತಿದ್ದವು. ಹೀಗಾಗಿ ಬ್ಯಾಂಕುಗಳ ಆದಾಯ ಊದಿಕೊಂಡು ಲಾಭವನ್ನು ತೋರಿಸಲು ಸಹಾಯಕವಾಗುತ್ತಿತ್ತು. ಆದರೆ ಈಗ ಹೊಸ ವ್ಯವಸ್ಥೆಯ ಅಡಿಯಲ್ಲಿ ಆದಾಯವನ್ನು, ಕೇವಲ ದಾಖಲಿಸದೆ, ವಾಸ್ತವಿಕವಾಗಿ ಗಳಿಸಬೇಕಾಗುತ್ತದೆ. ಕೆಳಮಟ್ಟದ ಲಾಭದ ಪ್ರಮಾಣದಿಂದಾಗಿ, ಬ್ಯಾಂಕುಗಳ ಮೂಲನಿಧಿಗೆ ಸರ್ಕಾರವು ಅಧಿಕ ಬಂಡವಾಳವನ್ನು ಪುನಃ ಪುನಃ ಸೇರಿಸಿ ಬಲಪಡಿಸಬೇಕಾಯಿತು. ಮಾರ್ಚ್ 31, 1993ರ ವರೆಗೆ 4,374 ಕೋಟಿ ರೂಪಾಯಿಗಳನ್ನು ಬ್ಯಾಂಕುಗಳ ಮೂಲ ಬಂಡವಾಳಕ್ಕೆ ಸರ್ಕಾರವು ಒದಗಿಸಿದೆ. 1993–94ರ ಆರ್ಥಿಕ ವರ್ಷದಲ್ಲಿ ಸರ್ಕಾರವು 5,700 ಕೋಟಿ ರೂಪಾಯಿಗಳನ್ನು ರಾಷ್ಟ್ರೀಕೃತ ಬ್ಯಾಂಕುಗಳ ಮೂಲ ಬಂಡವಾಳವನ್ನು ಹೆಚ್ಚಿಸಲು ಒದಗಿಸಿದೆ. ಈ ಸೌಲಭ್ಯವನ್ನು ಪಡೆಯುವ ಬ್ಯಾಂಕುಗಳು ಸರ್ಕಾರದ ಮಂತಿಗೆ ಬಂಡವಾಳವನ್ನು ಸರ್ಕಾರೀ ಬಾಂಡ್‌ಗಳಲ್ಲಿ ವಿನಿಯೋಗಿಸಬೇಕಾಗುತ್ತದೆ. ಅಲ್ಲದೆ ಬಂಡವಾಳದ ಪುನರ್ಘಟನೆ ಮತ್ತು ಬ್ಯಾಂಕುಗಳ ಬಲವರ್ಧನೆ ಬಹುಕಾಲ ತಾಳುವ ಆಧಾರದಲ್ಲಿ ನಡೆಯುತ್ತಿದೆಯೇ ಹೇಗೆಂದು ಖಚಿತಪಡಿಸಲು, ಲಾಭದ ಪ್ರಮಾಣ ಮತ್ತು ಆದಾಯ ಅನುಪಾತಗಳು, ಸಾಲದ ಗುಣಮಟ್ಟ ಮತ್ತು ಮರುಪಾವತಿಗಳು, ಗಣಕೀಕರಣ, ಗ್ರಾಹಕ ಸೇವೆ, ನಗದು ಮತ್ತು ಬಂಡವಾಳ ಹೂಡಿಕೆಗಳ ನಿರ್ವಹಣೆ ಇವುಗಳಿಗೆ ಸಂಬಂಧಿಸಿದ ನಿಶ್ಚಿತವಾದ ಕಾಲಮಿತಿಗೊಳಪಟ್ಟ ಕಟ್ಟುಪಾಡುಗಳಿಗೆ ಬ್ಯಾಂಕುಗಳು ಬದ್ಧವಾಗಬೇಕಾಗುತ್ತದೆ.

## ನಷ್ಟ ಸಂಭವನೀಯತೆಯ ಬೆಲೆ ಕಟ್ಟುವ ವ್ಯವಸ್ಥೆ

ಈಗ ಅನುಸರಿಸಲಾಗುತ್ತಿರುವ ಬಂಡವಾಳದ ಪುನರ್ಘಟನೆ ಯೋಜನೆಯು ಬ್ಯಾಂಕಿಂಗ್ ವ್ಯವಸ್ಥೆಯನ್ನು ಆರ್ಥಿಕವಾಗಿ ಸುಭದ್ರ ಹಾಗೂ ಕಾರ್ಯಸಾಧ್ಯವಾಗುವಂತೆ ಮಾಡಲು ಮೊದಲ ಹೆಜ್ಜೆಯಾಗಬಹುದಷ್ಟೆ. ಯಥೋಚಿತ ಬಂಡವಾಳ ಹೊಂದಲು ನಷ್ಟ ಸಂಭವನೀಯತೆಯ ಬೆಲೆ ಕಟ್ಟುವ ಮಾರ್ಗವನ್ನು ಅನುಸರಿಸುವಲ್ಲಿನ ಮೂಲತತ್ವವೇನೆಂದರೆ ಉನ್ನತ ನಷ್ಟ-ಸಂಭವ ಹಿನ್ನೆಲೆಯುಳ್ಳ ಸಂಸ್ಥೆಗಳು ಹೆಚ್ಚಿನ ಮಟ್ಟದ ಬಂಡವಾಳ ನಿಧಿಯನ್ನು ಹೊಂದಿರಬೇಕಾಗಿರುವುದು. ಕನಿಷ್ಟ ಬಂಡವಾಳ ನಿರ್ಧರಿಸಲು ಸಾಲದ ನಷ್ಟ-ಸಂಭವನೀಯತೆಗಳನ್ನು ಒಳಗೊಂಡಿರುವ ಇಂತಹ ಮಾರ್ಗದಿಂದ ಬ್ಯಾಂಕುಗಳು ನಷ್ಟ-ಸಂಭವನೀಯತೆಗೆ ಹೆಚ್ಚಾಗಿ ಸ್ಪಂದಿಸುವಂತೆ ಮತ್ತು ತಮ್ಮ ಬ್ಯಾಲನ್ಸ್‌ಶೀಟ್‌ಗಳನ್ನು ಜಾಗರೂಕತೆಯಿಂದ ರೂಪಿಸುವಂತೆ ಒತ್ತಡ ತರುತ್ತದೆ.

## ಸಂಪನ್ಮೂಲಗಳ ಕ್ರೋಢೀಕರಣ

ಲೆಕ್ಕಗಾರಿಕೆಗೆ ಸಂಬಂಧಿಸಿದ ಮಾಪಕಗಳ ಬಿಗಿತದಿಂದಾಗಿ ಮತ್ತು ಸಾಧಿಸಬೇಕಾದ ಕನಿಷ್ಠ ಬಂಡವಾಳ ಮಟ್ಟದ ಹೆಚ್ಚಳದಿಂದಾಗಿ, ರಾಷ್ಟ್ರೀಕೃತ ಬ್ಯಾಂಕುಗಳು ಬಹು ದೊಡ್ಡ ಬಂಡವಾಳ ಕೊರತೆಯನ್ನು ಅನುಭವಿಸಬೇಕಾಗುತ್ತದೆ. ಕನಿಷ್ಠ ಬಂಡವಾಳ ಅಗತ್ಯತೆಯನ್ನು ಪೂರೈಸಲು ಬ್ಯಾಂಕುಗಳು ಸರ್ಕಾರದಿಂದಾಗಲಿ ಬಂಡವಾಳ ಮಾರುಕಟ್ಟೆಯಿಂದಾಗಲಿ ಹೆಚ್ಚಿನ ಸಂಪನ್ಮೂಲಗಳನ್ನು ಕ್ರೋಢೀಕರಿಸಬೇಕಾಗುತ್ತದೆ. ಇದು ಹೆಚ್ಚಿನ ಬ್ಯಾಂಕುಗಳಿಗೆ ಅಷ್ಟು ಸುಲಭ ಸಾಧ್ಯವಾದ ವಿಷಯವಲ್ಲ. ಬ್ಯಾಂಕುಗಳು ಸಂಪನ್ಮೂಲ ಎತ್ತಲು ಬಂಡವಾಳ ಮಾರುಕಟ್ಟೆಯ ಮೇಲೆ ಅವಲಂಬಿಸಬೇಕಾದರೆ, ಆಕರ್ಷಕ ಆದಾಯ ಮತ್ತು ಲಾಭಾಂಶ ವಿತರಣೆಯನ್ನು ಬ್ಯಾಂಕುಗಳಿಂದ ಅಪೇಕ್ಷಿಸುವ ಭಾವೀ ಖಾಸಗಿ ಬಂಡವಾಳ ಹೂಡಿಕೆದಾರರನ್ನು ಆಕರ್ಷಿಸುವ ಸ್ಥಿತಿಯಲ್ಲಿ ಇರಬೇಕಾಗುತ್ತದೆ. ಅಲ್ಲದೆ ಸಾರ್ವಜನಿಕ ಕ್ಷೇತ್ರದ ಬ್ಯಾಂಕುಗಳು, ಖಾಸಗಿ ಕ್ಷೇತ್ರದ ದೇಶೀ ಹಾಗೂ ವಿದೇಶೀ ಬ್ಯಾಂಕುಗಳಿಂದ ಗ್ರಾಹಕಸೇವೆ, ನಿಧಿ ಸಂಗ್ರಹಿಸುವಲ್ಲಿನ ವೆಚ್ಚ, ತಂತ್ರಜ್ಞಾನದಲ್ಲಿನ ನಾವೀನ್ಯ, ಆಂತರಿಕ ನಿಯಂತ್ರಣಗಳು, ಉದ್ಯೋಗಿಗಳ ಕ್ರಿಯಾಶೀಲತೆ, ನಷ್ಟ-ಸಂಭವನೀಯತೆ ಮತ್ತು ಸ್ವತ್ತುಗಳ ನಿರ್ವಹಣೆ ಇವೇ ಮುಂತಾದ ವಿಷಯಗಳಲ್ಲಿ ಸ್ಪರ್ಧೆ ಎದುರಿಸಲು ತಯಾರಾಗಬೇಕಾಗುತ್ತದೆ.

## ಸ್ಪರ್ಧೆಯನ್ನೆದುರಿಸಲು ಸಿದ್ಧತೆ

ಕೆಲವು ವಿಭಾಗಗಳಲ್ಲಿ ವಿಶೇಷವಾಗಿ, ವಿದೇಶಿ ಬ್ಯಾಂಕುಗಳಿಂದ, ಸ್ಪರ್ಧೆಯನ್ನು ಎದುರಿಸಲು ಕೆಲವು ರಾಷ್ಟ್ರೀಕೃತ ಬ್ಯಾಂಕುಗಳು ಸಿದ್ಧತೆ ನಡೆಸಿವೆ. ನಷ್ಟದಲ್ಲಿರುವ ಶಾಖೆಗಳನ್ನು ಮುಚ್ಚಿ ಇಲ್ಲವೆ ಅವುಗಳನ್ನು ಲಾಭದಲ್ಲಿರುವ ಶಾಖೆಗಳೊಂದಿಗೆ ವಿಲೀನಗೊಳಿಸಿ ತಮ್ಮ ಶಾಖಾ ಜಾಲವನ್ನು ಪುನರ್ಘಟಿಸಲು ಈ ಬ್ಯಾಂಕುಗಳು ಪ್ರಯತ್ನಿಸುತ್ತಿವೆ. ಬ್ಯಾಂಕಿಂಗ್ ತಂತ್ರಜ್ಞಾನದ ಮಟ್ಟವನ್ನು ಹೆಚ್ಚಿಸಲು ಗಣಕೀಕರಣವನ್ನು ಕೈಗೊಳ್ಳುತ್ತಿವೆ. ಗ್ರಾಹಕ ವರ್ಗದಲ್ಲಿಯ ಭಿನ್ನತೆಯನ್ನು ಗುರುತಿಸಿ, ಅಂತಹ ಖಾತೆಗಳನ್ನು ಪೋಷಿಸುವಲ್ಲಿನ ವೆಚ್ಚಕ್ಕೆ ಅನುಗುಣವಾದ ಸೇವೆಯನ್ನು ನೀಡಲು ಉದ್ಯುಕ್ತವಾಗಿವೆ. ಠೇವಣಿ ಮಿಶ್ರಣವನ್ನು ಬದಲಾಯಿಸಲು ಪ್ರಯತ್ನಿಸುತ್ತಿವೆ. ಹೆಚ್ಚಿನ ವೆಚ್ಚದ ಠೇವಣಿಗಳಾದ ಠೇವಣಿ ಪ್ರಮಾಣಪತ್ರಗಳನ್ನು ಪ್ರಜ್ಞಾಪೂರ್ವಕವಾಗಿ ತಗ್ಗಿಸಲು ಪ್ರಯತ್ನಿಸುತ್ತಿವೆ.

ಶಾಖಾಜಾಲ: ಸಾರ್ವಜನಿಕ ಕ್ಷೇತ್ರದ ಬ್ಯಾಂಕುಗಳಿಗೆ ಇರುವ ವಿಸ್ತಾರವಾದ ಶಾಖೆಗಳ ಜಾಲವೇ ಅವುಗಳಿಗೆ ಇರುವ ಬಹು ಮುಖ್ಯ ಶಕ್ತಿ. ಭಾರತದ ದೊಡ್ಡ ಬ್ಯಾಂಕುಗಳು ಗ್ರಾಮೀಣ, ತಾಲ್ಲೂಕು, ದೊಡ್ಡ ನಗರಗಳು ಮತ್ತು ಅಂತಾರಾಷ್ಟ್ರೀಯ, ಈ ನಾಲ್ಕು ಮಟ್ಟಗಳಲ್ಲಿ ಕಾರ್ಯನಿರ್ವಹಿಸಬೇಕಾಗುತ್ತದೆ. ಗ್ರಾಮೀಣ ಮತ್ತು ತಾಲ್ಲೂಕು ಮಟ್ಟದಲ್ಲಿ ವಿದೇಶಿ ಬ್ಯಾಂಕುಗಳ ಉಪಸ್ಥಿತಿ ಇಲ್ಲ. ಅಲ್ಲದೆ ಅದು ಆಗುವ ಸಂಭವವೂ ಇಲ್ಲ. ಭಾರತೀಯ ಸ್ಟೇಟ್ ಬ್ಯಾಂಕು ಮತ್ತು ರಾಷ್ಟ್ರೀಕೃತ ಬ್ಯಾಂಕುಗಳು ಈ ಪ್ರದೇಶಗಳಲ್ಲಿ ಕಾರ್ಯನಿರತವಾಗಿವೆ. ಗ್ರಾಮೀಣ ಪ್ರದೇಶಗಳಲ್ಲಿ ಪ್ರಾದೇಶಿಕ ಗ್ರಾಮೀಣ ಬ್ಯಾಂಕುಗಳನ್ನು ಸ್ಥಾಪಿಸಲಾಗಿದೆ. ಇವುಗಳ ಒಡೆತನ ಹೊಂದಿರುವ ದೊಡ್ಡ ಸಾರ್ವಜನಿಕ ಕ್ಷೇತ್ರದ ಬ್ಯಾಂಕುಗಳು ಇವನ್ನು ಸ್ಥಾಪಿಸಿ ಇವುಗಳ ಆಡಳಿತ ನಿರ್ವಹಿಸುತ್ತವೆ.

## ವಿದೇಶೀ ಬ್ಯಾಂಕುಗಳಿಂದ ಸ್ಪರ್ಧೆ

ದೊಡ್ಡ ನಗರಗಳು ಮತ್ತು ಬೃಹನ್ನಗರಗಳಲ್ಲಿ ಮಾತ್ರ ಬ್ಯಾಂಕುಗಳು ನಿಜವಾದ ಸ್ಪರ್ಧೆಯನ್ನು ಎದುರಿಸಬೇಕಾಗುತ್ತದೆ. ಈ ಕೇಂದ್ರಗಳಲ್ಲಿ ಭಾರತೀಯ ಬ್ಯಾಂಕುಗಳ ಮಧ್ಯೆ ಮಾತ್ರವಲ್ಲದೆ ವಿದೇಶೀ ಬ್ಯಾಂಕುಗಳ ಜೊತೆಗೂ ಸ್ಪರ್ಧೆ ಇದೆ. ಭಾರತೀಯ ಬ್ಯಾಂಕುಗಳ ಮಧ್ಯೆ ವ್ಯಕ್ತಿಗತ ಬ್ಯಾಂಕಿಂಗ್‌ನಲ್ಲಿ ಸ್ಪರ್ಧೆ ತೀವ್ರವಾಗುತ್ತಿರುವುದಲ್ಲದೆ ಅವು ವಿದೇಶೀ ಬ್ಯಾಂಕುಗಳೊಡನೆ ಪೂರ್ಣವ್ಯಾಪ್ತಿಯ ಬ್ಯಾಂಕಿಂಗ್ ಮತ್ತು ವಿತ್ತವಿಲ್ಲದ ವಹಿವಾಟುಗಳಲ್ಲಿ ಸ್ಪರ್ಧೆಯನ್ನು ಎದುರಿಸಬೇಕಾಗಿದೆ. ವಿದೇಶೀ ಬ್ಯಾಂಕುಗಳು ಕೆಲವೊಂದು ಪ್ರಬಲವಾದ ಅಂಶಗಳನ್ನು ಹೊಂದಿವೆ. ಅವೆಂದರೆ—ಅತ್ಯಾಧುನಿಕ ತಂತ್ರಜ್ಞಾನ, ಸಿಬ್ಬಂದಿಯನ್ನು ಆಕರ್ಷಿಸುವ ಸಾಮರ್ಥ್ಯ (ಏಕೆಂದರೆ ಅವು ತಮ್ಮ ವಿವಿಧ ಮಟ್ಟದ ಉದ್ಯೋಗಿಗಳಿಗೆ ಉತ್ಕೃಷ್ಟ ವೇತನ ಭತ್ಯೆಗಳನ್ನು ನೀಡಬಲ್ಲವು), ಅವುಗಳಿಗೆ ವಿದೇಶಗಳಲ್ಲಿ ಸಂಪನ್ಮೂಲಗಳನ್ನು ಕ್ರೋಢೀಕರಿಸಲು ಇರುವ ಸೌಲಭ್ಯ, ಭಾರತದಲ್ಲಿರುವ ಬಹುರಾಷ್ಟ್ರೀಯ ಕಂಪನಿಗಳಿಗೆ ಸೇವೆ ನೀಡಲು ಅವುಗಳಿಗೆ ಸಹಾಯಕವಾಗುವ ವಿಶ್ವದಾದ್ಯಂತದ ಬಾಂಧವ್ಯ.

ಇನ್ನು ವಿಭಿನ್ನ ದೃಷ್ಟಿಯಲ್ಲಿ ಹೇಳುವುದಾದರೆ ಚೆಕ್ ಮತ್ತು ಇನ್ನುಳಿದ ಕಾಗದ-ಪತ್ರಗಳ ವಿಲೇವಾರಿಯನ್ನು ದೇಶದ ಯಾವುದೇ ಭಾಗದಲ್ಲಿ ಮಾಡಲು ಅವಶ್ಯವಿರುವ ಮೂಲಭೂತ ವ್ಯವಸ್ಥೆಯನ್ನು ಭಾರತೀಯ ಬ್ಯಾಂಕುಗಳು ಹೊಂದಿವೆ. ಇಂತಹ ಮೂಲಭೂತ ವ್ಯವಸ್ಥೆಯ ಮೂಲಕ ಅವು ತಮ್ಮ ಆದಾಯವನ್ನು ಹೆಚ್ಚಿಸಿಕೊಳ್ಳಬಹುದು.

## ಅಂತರಾಷ್ಟ್ರೀಯ ಬ್ಯಾಂಕಿಂಗ್

ಅಂತಾರಾಷ್ಟ್ರೀಯ ಕ್ಷೇತ್ರದಲ್ಲಿ ಭಾರತೀಯ ಬ್ಯಾಂಕುಗಳು ಮುಖ್ಯವಾಗಿ ಅನಿವಾಸಿ ಭಾರತೀಯರಿಗೆ ಸೇವೆ ನೀಡುತ್ತಿವೆ. ಭಾರತೀಯ ಬ್ಯಾಂಕುಗಳ ಅಧಿಕ ಸಂಖ್ಯೆಯ ವಿದೇಶಿ ಶಾಖೆಗಳು ಕಳೆದ ಕೆಲವು ವರ್ಷಗಳಿಂದ ಭಾರೀ ನಷ್ಟವನ್ನು ಅನುಭವಿಸಿವೆ. ಮಾತ್ರವಲ್ಲದೆ ಅಂತಾರಾಷ್ಟ್ರೀಯ ಬ್ಯಾಂಕಿಂಗ್‌ನಲ್ಲಿನ ಸ್ಪರ್ಧೆಯು ಅಗಾಧ ಪ್ರಮಾಣದಲ್ಲಿ ಬೆಳೆದಿರುವುದರಿಂದ, ಈ ನಷ್ಟದ ಪ್ರವೃತ್ತಿ ಮುಂದುವರಿಯಬಹುದು. ಒಮ್ಮೆ ಭಾರತೀಯ ಕಂಪನಿಗಳು ಅಂತಾರಾಷ್ಟ್ರೀಯ ಕ್ಷೇತ್ರದಲ್ಲಿ ದೊಡ್ಡ ಪ್ರಮಾಣದಲ್ಲಿ ಕಾರ್ಯಾಚರಣೆ ಆರಂಭಿಸಿ, ಬಹುರಾಷ್ಟ್ರೀಯ ಕಂಪನಿಗಳಾದಾಗ, ಭಾರತೀಯ ಬ್ಯಾಂಕುಗಳು ವಿದೇಶಗಳಲ್ಲಿಯ ಆಯ್ದ ಕೇಂದ್ರಗಳಲ್ಲಿ ತಮ್ಮ ಉಪಸ್ಥಿತಿಯ ಅರಿವು ಮಾಡಿಕೊಡುವುದನ್ನು ನಿರೀಕ್ಷಿಸಬಹುದು.

## ಖಾಸಗಿ ಬ್ಯಾಂಕುಗಳ ಪ್ರವೇಶ

1994ರ ಆದಿಭಾಗದಲ್ಲಿ ಜಾರಿಗೆ ಬಂದ ಬ್ಯಾಂಕಿಂಗ್ ನಿಯಂತ್ರಣ (ತಿದ್ದುಪಡಿ) ಮಸೂದೆಯಿಂದಾಗಿ ಹೊಸ ಖಾಸಗಿ ಬ್ಯಾಂಕುಗಳ ಸ್ಥಾಪನೆಗೆ ನಾಂದಿಯಾಗಿದೆ. ಹೊಸ ಖಾಸಗಿ ಬ್ಯಾಂಕು

ಗಳು ಕನಿಷ್ಠ 100 ಕೋಟಿ ರೂಪಾಯಿಗಳ ಮೂಲ ಬಂಡವಾಳದೊಂದಿಗೆ ಆರಂಭವಾಗಬೇಕೆಂದು ವಿಧಿಸಲಾಗಿದೆ. ಖಾಸಗಿ ಕ್ಷೇತ್ರದ ಬ್ಯಾಂಕುಗಳಿಗೆ, ರಾಷ್ಟ್ರೀಕೃತ ಬ್ಯಾಂಕುಗಳಿಗೆ ಇರುವಂತಹ ವ್ಯಾಪ್ತಿ ಮತ್ತು ಸಂಪನ್ಮೂಲಗಳಿರುವುದಿಲ್ಲ. ಅಲ್ಲದೇ ಖಾಸಗೀ ಬ್ಯಾಂಕುಗಳು ಹೆಚ್ಚಾಗಿ ಬೃಹನ್ನಗರಗಳು ಹಾಗೂ ಇನ್ನುಳಿದ ಅಭಿವೃದ್ಧಿ ಹೊಂದುತ್ತಿರುವ ನಗರಗಳಿಗೆ ಮಾತ್ರ ಸಾಂದ್ರೀಕೃತವಾಗುತ್ತವೆ. ಮುಂಬರುವ ದಿನಗಳಲ್ಲಿ ಭಾರೀ ಯೋಜನೆಗಳ ಅನುಷ್ಠಾನದಿಂದಾಗಿ ದೊಡ್ಡ ಕಂಪನಿಗಳ ಅಗತ್ಯಗಳು ಹೆಚ್ಚಾಗುತ್ತಲೇ ಹೋಗುವವು. ಹೀಗಾಗಿ 100 ಕೋಟಿ ರೂಪಾಯಿಗಳ ಬಂಡವಾಳ ಮತ್ತು ಸುಮಾರು 1000 ಕೋಟಿ ರೂಪಾಯಿಗಳ ಠೇವಣಿಗಳೊಂದಿಗೆ ಆರಂಭಿಸಲಾದ ಖಾಸಗಿ ಬ್ಯಾಂಕುಗಳು ಈ ಅಗತ್ಯಗಳನ್ನು ಪೂರೈಸಲು ಅಸಫಲವಾಗಬಹುದು. ಕೆಲವೊಂದು ಗುಂಪುಗಳಿಗೆ ಸಾಲ ನೀಡಲು ಒತ್ತಾಯ ಕೂಡ, ಖಾಸಗಿ ಒಡೆತನದೊಂದಿಗೆ ಬರುತ್ತದೆ.

**ಬಡ್ಡಿ ದರಗಳಲ್ಲಿ ಇಳಿಕೆ**

ಈ ವರ್ಷ ಭಾರತೀಯ ರಿಸರ್ವ್ ಬ್ಯಾಂಕು, ವಾಣಿಜ್ಯ ಬ್ಯಾಂಕುಗಳ ಸಾಲ ನೀತಿಗೆ ಸಂಬಂಧಿಸಿದಂತೆ ಕೆಲವು ಬದಲಾವಣೆಗಳನ್ನು ಪ್ರಕಟಿಸಿದೆ. ಇದರನ್ವಯ ಎರಡು ಲಕ್ಷ ರೂಪಾಯಿಗಳಿಗಿಂತ ಮೇಲಿನ ಸಾಲದ ಕನಿಷ್ಠ ಬಡ್ಡಿದರದ ಮಿತಿಯನ್ನು ರದ್ದುಗೊಳಿಸಿದ್ದೇ ಅಲ್ಲದೆ ಇಪ್ಪತ್ತೈದು ಸಾವಿರದಿಂದ ಎರಡು ಲಕ್ಷ ರೂಪಾಯಿ ವರೆಗಿನ ಎಲ್ಲ ತೆರನ ಸಾಲಗಳಿಗೆ ಶೇಕಡ 13.5ರ ಸಮಾನ ಬಡ್ಡಿ ದರವನ್ನು ನಿಗದಿಪಡಿಸಲಾಗಿದೆ. ದೇಶದ ಪ್ರಮುಖ ಬ್ಯಾಂಕುಗಳ ವಿವಿಧ ಸಾಲಗಳ ಬಡ್ಡಿ ದರ ಶೇಕಡ 13.5 ಮತ್ತು ಶೇಕಡ 17ರ ನಡುವೆ ನಿಗದಿಗೊಳ್ಳಲಿದೆ. ಈ ರೀತಿಯ ಬಡ್ಡಿ ದರದ ಮೇಲಿನ ನಿಯಂತ್ರಣ ರದ್ದತಿಯಿಂದಾಗಿ ವಿವಿಧ ಬ್ಯಾಂಕುಗಳ ಮಧ್ಯೆ ಸ್ಪರ್ಧೆ ಏರ್ಪಡಬಹುದಾಗಿದೆ. ಅಲ್ಲದೆ ಪ್ರತಿ ಬ್ಯಾಂಕಿಗೆ ಅವಧಿ ಸಾಲಗಳ ಮೇಲೆ ಇದ್ದ 50 ಕೋಟಿ ರೂಪಾಯಿಗಳ ಮಿತಿಯನ್ನು ತೆಗೆದುಹಾಕಲಾಗಿದೆ. ಇದರಿಂದಾಗಿ ಬ್ಯಾಂಕುಗಳು ದೀರ್ಘಾವಧಿ ಸಾಲಗಳನ್ನು ನೀಡುವ ಮುಂತಾದ ಸಂಸ್ಥೆಗಳ ಜೊತೆ ಸ್ಪರ್ಧಿಸಲು ಅವಕಾಶ ನೀಡಿದಂತಾಗಿದೆ.

ಬ್ಯಾಂಕಿಂಗ್ ಕ್ಷೇತ್ರದ ಇವೆಲ್ಲ ಸುಧಾರಣೆಗಳ ಹಾಗೂ ಬದಲಾವಣೆಗಳ ಮೇಲ್ವಿಚಾರಣೆ ನಡೆಸಲು ಭಾರತೀಯ ರಿಸರ್ವ್ ಬ್ಯಾಂಕು ತನ್ನ ಮೇಲ್ವಿಚಾರಣಾ ಯಂತ್ರವನ್ನು ಬಲಪಡಿಸಬೇಕಾಗುತ್ತದೆ. ಅದೇ ಕಾಲಕ್ಕೆ ಬ್ಯಾಂಕುಗಳಿಗೆ ವಿಧಿಸಿದ ನಿಯಮಗಳು ಮತ್ತು ನಿಯಂತ್ರಣಗಳ ಚೌಕಟ್ಟಿನಲ್ಲಿಯೇ ಅವುಗಳಿಗೆ ತಕ್ಕ ಮಟ್ಟಿನ ಸ್ವಾತಂತ್ರ್ಯವನ್ನು ನೀಡಬೇಕಾಗುತ್ತದೆ. ●

# ಸಾರ್ವಜನಿಕ ವಲಯದ ಬ್ಯಾಂಕುಗಳು

ಖಾಸಗಿ ಮತ್ತು ಸರ್ಕಾರಿ—ಈ ಎರಡರಲ್ಲಿ ಸರ್ಕಾರಿಯೇ ಉತ್ಕೃಷ್ಟ ಎನ್ನುವ ಕಾಲವೊಂದಿತ್ತು. ಹೊಸ ಆರ್ಥಿಕ ನೀತಿಯ ಯುಗದಲ್ಲಿ ವಾಪಸಿ ಎಂಬ ಭಾವನೆ ಬೆಳೆಯುತ್ತಿದೆ. ರಾಷ್ಟ್ರೀಕೃತ ಬ್ಯಾಂಕುಗಳು ತಮ್ಮ ದೇಹಭಾರದಿಂದಾಗಿಯೇ ನಷ್ಟಜೀವಿಗಳಾದ ಡಿನೋಸಾರುಗಳ ಹಾಗೆ; ಅವುಗಳ ಆಗಿಹೋಯಿತು—ಎನ್ನುವ ಭಾವನೆ ಉಂಟಾಗಿದೆ. ಖಾಸಗಿ ವಲಯದಲ್ಲಿ ಬ್ಯಾಂಕುಗಳ ಸ್ಥಾಪನೆಗೆ ಈಚೆಗೆ ಹೆಚ್ಚಿನ ಅವಕಾಶಗಳು ದೊರಕಿವೆ.

ಆದರೆ ಸಾರ್ವಜನಿಕ ವಲಯದ ಬ್ಯಾಂಕುಗಳು ಸಡ್ಡು ಹೊಡೆದು ನಿಲ್ಲತೊಡಗಿವೆ. 1993–94ರಲ್ಲಿ ಅವು ಒಟ್ಟು ರೂ. 4423 ಕೋಟಿ ನಷ್ಟ ಅನುಭವಿಸಿದ್ದುವು. ಆದರೆ ಮರುವರ್ಷ ಅವುಗಳ ಲಾಭ ರೂ 1115 ಕೋಟಿ. ಇಪ್ಪತ್ತೇಳು ಬ್ಯಾಂಕುಗಳ ಪೈಕಿ ಇಪ್ಪತ್ತಾರು ಬ್ಯಾಂಕುಗಳು ಲಾಭದ ಹಾದಿ ಹಿಡಿದಿವೆ. ಹೆಚ್ಚು ಸ್ಪರ್ಧಾತ್ಮಕವಾಗಿ ವ್ಯವಹಾರ ನಡಸುವ ಅವಕಾಶ ಅವಕ್ಕೆ ದೊರಕುತ್ತಿದೆ. ಗಣಕೀಕರಣ, ವಿಶೇಷ ಕ್ಷೇತ್ರಗಳಿಗೆ ಸಂಬಂಧಿಸಿದಂತೆ ಪ್ರತ್ಯೇಕ ಶಾಖೆಗಳ ಆರಂಭ, ವ್ಯಾಪಕ ಶಾಖಾಜಾಲದ ಮೂಲಕ ಹೆಚ್ಚು ಠೇವಣಿ ಸಂಗ್ರಹಣೆ, ಅನುಮಾನ ಹಾಗೂ ಕರಡು ಋಣಗಳಿಗೆ ಯಥೋಚಿತ ಮುನ್ನೇರ್ಪಾಟು, ಸಾಲದ ಮೇಲೆ ಬಡ್ಡಿ ವಿಧಿಸುವ ವಿಚಾರದಲ್ಲಿ ಹೆಚ್ಚಿನ ವಿವೇಚನೆ ಮುಂತಾದ ಕ್ರಮಗಳಿಂದಾಗಿ ಸರ್ಕಾರಿ ವಲಯದ ಬ್ಯಾಂಕುಗಳು ಮುನ್ನಡೆ ಸಾಧಿಸಿವೆ. ಖಾಸಗಿ ಬ್ಯಾಂಕುಗಳ ಚಟುವಟಿಕೆಗಳು ನಗರ ಪ್ರದೇಶಗಳಿಗೇ ಹೆಚ್ಚಾಗಿ ಸೀಮಿತ. ಅವುಗಳ ನಿಧಿಗಳೂ ಅಷ್ಟೇ. ಸರ್ಕಾರಿ ವಲಯದ ಬ್ಯಾಂಕುಗಳ ಒಂದು ದೊಡ್ಡ ಲೋಪವೆಂದರೆ, ಅವುಗಳ ನಷ್ಟ ಸಂಭಾವ್ಯತಾಭರಿತ ಆಸ್ತಿಗಳಿಗೆ ತಕ್ಕಂತೆ ಬಂಡವಾಳ ಇಲ್ಲದಿದ್ದದ್ದು. ಬಂಡವಾಳ ಪರ್ಯಾಪ್ತತೆಯ ಸಾಧನೆಗಾಗಿ ಬ್ಯಾಂಕುಗಳು ಕ್ರಮ ತೆಗೆದುಕೊಳ್ಳುತ್ತಿವೆ. ಬ್ಯಾಂಕುಗಳ ಬಂಡವಾಳ ಪೂರಣಕ್ಕಾಗಿ ಸರ್ಕಾರ ತನ್ನ ಆಯವ್ಯಯದಲ್ಲಿ ಹಣ ತೆಗೆದಿಡುತ್ತ ಬರುತ್ತಿದೆ. ವಿಶ್ವ ಬ್ಯಾಂಕು ಸರ್ಕಾರಿ ಬ್ಯಾಂಕುಗಳ ನೆರವಿಗೆ ಬಂದಿವೆ. ಸರ್ಕಾರಿ ವಲಯದ ಬ್ಯಾಂಕುಗಳು ಮೈಕೊಡವಿ ಎದ್ದು ನಿಲ್ಲುತ್ತಿವೆ. ಬ್ಯಾಂಕುಗಳ ಪರಂಪರಾಗತ ಕಾರ್ಯಭಾರವಾದ ಮಧ್ಯಸ್ಥಗಾರಿಕೆಗೆ ಚ್ಯುತಿಯುಂಟಾಗುತ್ತಿರುವ ಕಾಲದಲ್ಲಿ ಹೊಸ ದಿಕ್ಕುಗಳಲ್ಲಿ ಅವು ಕಣ್ಣುಹಾಯಿಸುತ್ತಿವೆ. ಈ ರಾಷ್ಟ್ರವ್ಯಾಪಿ ಬ್ಯಾಂಕುಗಳು ಆರೋಗ್ಯಕರವಾಗಿಯೂ ಬಲಿಷ್ಠವಾಗಿಯೂ ಪರಿಣಮಿಸುವುದಾದರೆ ಅದು ಎಲ್ಲರಿಗೂ ಸಂತೋಷ ನೀಡುವ ಸಂಗತಿಯೇ. ●

R. N. 36702/83

ಶುಭಾಶಯಗಳೊಡನೆ

ಕಲಾತ್ಮಕ ಮುದ್ರಣಕಾರರು

# ಮೈಸೂರು ಪ್ರಿಂಟಿಂಗ್ ಪ್ರೆಸ್

1210, ಕಾಂತರಾಜ ಅರಸು ರಸ್ತೆ
ಕೃಷ್ಣಮೂರ್ತಿಪುರಂ, ಮೈಸೂರು 570 005
ದೂರವಾಣಿ : 24 869



# ಮೈಸೂರು ಪ್ರಿಂಟಿಂಗ್ ಅಂಡ್ ಪಬ್ಲಿಷಿಂಗ್ ಹೌಸ್

ಅಶೋಕ ರಸ್ತೆ, ಟೌನ್‌ಹಾಲ್ ಎದುರು
ಮೈಸೂರು 570 001
ದೂರವಾಣಿ : 52 10 06

PRINTED BY G. H. KRISHNAMURTHY, MYSORE PRINTING AND PUBLISHING HOUSE, ASHOKA ROAD, MYSORE 570 001